ಪ್ರಕಾಶಕರು

ಶಿಂಥುವಳ್ಳಿ ಅನಂತಮೂರ್ತಿ

೧೪೩೩, ಹಳೇ ಅಗ್ರಹಾರ, ಮೈಸೂರು



ಮೊದಲನೆಯ ಮುದ್ರಣ : ೧೯೫೬



ಬೆಲೆ : ಸಾದಾ ಪ್ರತಿ ೧-೧೨-೦

ಕ್ಯಾಲಿಕೊ ಪ್ರತಿ ೩-೦-೦

ಮುಖಚಿತ್ರ :

ಶ್ರೀ ಆರ್. ಎಸ್. ನಾಯಿಡು

ಮುದ್ರಕರು :

ಬೀಳಗಿ ರಾಮಣ್ಣನವರು

ಲಿಂಗರಾಜ ಆರ್ಟ ಪ್ರೆಸ್, ಮನೆ ನಂ. ೨೨೦

ಮಾಳಮಡ್ಡಿ, ಧಾರವಾಡ

# ಎರಡು ಮಾತು

ನಾನು ಸಣ್ಣ ಕತೆಗಳನ್ನು ಬರೆಯಲು ಪ್ರಾರಂಭಿಸಿದುದು ೧೯೫೪ ರಲ್ಲಿ. ಮೊದಲ ಒಂದೂವರೆ ವರ್ಷದಲ್ಲಿ ಬರೆದ ಹನ್ನೆರಡು ಕತೆಗಳು ಇವು.

ಈ ಕತೆಗಳನ್ನು ಸಂಕಲನ ರೂಪದಲ್ಲಿ ಅಚ್ಚು ಮಾಡಲು ಮುಂದೆ ಬಂದ ಸುರುಚಿ ಪ್ರಕಾಶನದ ಶ್ರೀ ಶಿಂಧುವಳ್ಳಿ ಅನಂತಮೂರ್ತಿ ಅವರಿಗೆ, ಅಂದವಾಗಿ ಮುದ್ರಿಸಿ ಕೊಟ್ಟ ಲಿಂಗರಾಜ ಪ್ರೆಸ್ಸಿನವರಿಗೆ, ಮುಖಚಿತ್ರ ಬರೆದುಕೊಟ್ಟ ಶ್ರೀ ಆರ್. ಎಸ್. ನಾಯಿಡು ಅವರಿಗೆ, ಕತೆಗಳನ್ನು ಪ್ರಕಟಿಸಿ ಉಪಕರಿಸಿದ 'ಜನಪ್ರಗತಿ', 'ಪ್ರಜಾವಾಣಿ', 'ಚಿತ್ರಗುಪ್ತ', ಮತ್ತು 'ರೂಪವಾಣಿ', ಪತ್ರಿಕೆಗಳ ಸಂಪಾದಕರಿಗೆ ಬಯ್ದು, ಬಯ್ಯದೆ, ಪ್ರೋತ್ಸಾಹ ಕೊಟ್ಟ ಗೆಳೆಯಗೆಳತಿಯರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆ.

ತಾ. ೨೦-೩-೧೯೫೬
೨೬೬೮, ಎರಡನೆಯ ಮೈನ್ ರಸ್ತೆ
ವಾಣಿವಿಲಾಸ ಮೊಹಲ್ಲ
ಮೈಸೂರು.

ರಾಜಲಕ್ಷ್ಮಿ ಎನ್. ರಾವ್

# ವಿಷಯ ಸೂಚಿಕೆ

# ಕೆಂಪು, ಕಪ್ಪು, ಬಿಳುಪು

“ಊರು ಸೇರುವ ಹೊತ್ತಿಗೆ ಮಧ್ಯಾಹ್ನ ಎರಡು ಗಂಟೆ ಆಗಿತ್ತು. ದೊಡ್ಡ ಊರು, ದೊಡ್ಡ ಮನೆಗಳು, ರಸ್ತೆಗಳು. ಹೋಟೆಲುಗಳು, ಅಂಗಡಿಗಳು—ಎಲ್ಲಾ ಹೊಸವು; ಚರ್ಚುಗಳು ಮಾತ್ರ ಹಳೆಯವು !

ಬಸ್ ಸ್ಟ್ಯಾಂಡಿಗೆ ಹತ್ತಿರದಲ್ಲಿದ್ದ ಹೋಟಲೊಂದರಲ್ಲಿ ಇಳಿದು ಕೊಂಡೆ. ಊಟವಾಗುತ್ತಲೂ ನಿದ್ರೆ. ಎದ್ದಾಗ ಆರು ಗಂಟೆ! ಕಾಫಿ ಕುಡಿಯಬೇಕೆನ್ನಿಸಿತು. ಸಮೀಪದಲ್ಲೇ ಇದ್ದ ಸ್ವಿಚ್ಚನ್ನೊತ್ತಿದೆ.

ಕರೆಗಂಟೆಗೆ ಉತ್ತರವಾಗಿ ಬಂದ ಹುಡುಗ ಅಪ್ಪಣೆ ಪಡೆದು ಬಾಗಿಲು ಮುಂದೆಮಾಡಿ ಹೋದ. ಎರಡು ನಿಮಿಷಗಳ ನಂತರ ಮಂಚದಿಂದ ಎದ್ದು ಮೈ ಮುರಿದೆ. ಬಸ್ಸಿನ ಪ್ರಯಾಣದಿಂದ ಮುದುರಿದ್ದ ಮೈ ವಿಶ್ರಾಂತಿಯಿಂದ ನೆಮ್ಮದಿ ಹೊಂದಿತ್ತು.

ನಿದ್ರೆಯ ಪದರಪದರದಲ್ಲೂ ಕಡಲ ಕರೆ ಕೇಳಿಬರುತ್ತಿತ್ತು. ವಾಸ್ಕೊ ಡ ಗಾಮ ದೃಷ್ಟಿಯಿಂದ ಮರೆಯಾದರೂ ನಿದುಳಿನಲ್ಲಿ ಅದರ ಛಾಯೆ ಮಾಸಿರಲಿಲ್ಲ........ಪಟ್ಟಣದ ಗದ್ದಲದಿಂದ ದೂರವಾದ ಸಮುದ್ರ. ಜನರಿಂದ ವಿಶ್ರಾಂತಿ ಪಡೆದ ಮರಳಿನ ಹಳದಿ ಹರಡು. ಆಕಾಶದಿಂದ ನೀಲಿಯನ್ನು ಪಡೆದ ನೀರಿನ ವಿಸ್ತಾರ. ಮೇಲೆ, ಚಲಿಸದ ಅಲೆಗಳಂತೆ ಆಕಾಶದಲ್ಲಿ ಮಲಗಿದ್ದ ಮೋಡಗಳು. ಮರಳಿನ ಮೇಲೆ ಸಮುದ್ರಕ್ಕೆ ಅಂಚು ಕಟ್ಟಿದ ಬಣ್ಣ ಬಣ್ಣದ ಕಪ್ಪೆ ಚಿಪ್ಪುಗಳು;

ಅಲೆಗಳ ಮಾತನ್ನು ಕಿವಿಗುಸುರುವ ಶಂಖಗಳು, ದೂರದಲ್ಲಿ ಒಂದೆ ರಡು ಗುಡಿಸಲುಗಳ ಮುಂದೆ ಮೀನುಗಳನ್ನು ಒಣಗಿಸುತ್ತ ಕುಳಿತ ಹೆಂಗಸರು. ಹಗ್ಗಕ್ಕೆ ಕಟ್ಟಿದ ಮೀನು ಸಾಲು. ಬಿಸಿಲಲ್ಲಿ ಸತ್ತ ಮೀನಿನ ಮೈ ಉದ್ದದ ವಜ್ರ. ಬಿಡುವಿಲ್ಲದೆ ಹರಟುತ್ತಿದ್ದ ಬಿಗಿ ಮೈಯ ಹೆಂಗಸರು. ದಪ್ಪ ಮೈಗಳನ್ನು ಕಷ್ಟದಿಂದ ಹೊತ್ತ ಹಂದಿ ಗಳು. ಅಶಾಂತ ಅಲೆಗಳ ಕೆಳಗೆ ಮಲಗಿದ್ದ ಶಾಂತ ಸಮುದ್ರ ಮನ ಸ್ಸಿಗೂ ಶಾಂತಿ ತರುತ್ತಿತ್ತು. ಬಿಟ್ಟು ಬರಲು ಮನಸ್ಸೇ ಇರಲಿಲ್ಲ.... ಮತ್ತೆ ಬಸ್ಸಿನ ಪ್ರಯಾಣ ಊರುಗಳು, ಕೆಟ್ಟ ಹೋಟೆಲುಗಳು, ಧೂಳು, ಸೆಕೆ, ಅಪರಿಚಿತ ಜನ, ಭಾಷೆ; ಎಲ್ಲೆಡೆಯಲ್ಲೂ ಮೀನಿನ ಮತ್ತು ಕೊಬ್ಬರಿ ಎಣ್ಣೆಯ ವಾಸನೆ. ಬಿಸಿಲಿಗೆ ಬಳಲಿದ ಬಸ್ಸು.... ಯಾವುದೂ ಇನ್ನೂ ಸ್ಮೃತಿಯನ್ನು ಬೀಳ್ಕೊಟ್ಟಿರಲಿಲ್ಲ.. ನಿದ್ರೆಯ ತುಂಬ ಸಮುದ್ರ, ಮರಳು, ಸಮುದ್ರ, ಮರಳು. ಜೊತೆ ಜೊತೆಯಲ್ಲಿ ಡೇಲೂಯಿಯವರ ಕವನದ ಸಾಲುಗಳ ಅಲೆ ಅಲೆ: 'The sea drained off .. I pray the sea return.... '

ಕ್ರಾಪು ಬಾಚುತ್ತಿದ್ದ ಕೈ ಕೆಳಗಿಳಿಯಿತು. ಇನ್ನೂ ಲೇಖನ ಬರೆದಿರಲಿಲ್ಲ!

ಸದ್ದು ಮಾಡದೆ ಬಾಗಿಲು ತೆಗೆದು ಬಂದ ಹುಡುಗ. ಕೈಯಲ್ಲಿದ್ದ ತಟ್ಟೆಯನ್ನು ಮೇಜಿನಮೇಲಿಟ್ಟ. ತಟ್ಟೆಯಲ್ಲಿ ಕಾಫಿ ತುಂಬಿದ ಪಾತ್ರೆ, ತಟ್ಟೆ, ಬಟ್ಟಲು, ಎರಡು ಪ್ಯಾಕ್ ಸಿಗರೇಟ್.

ಕಾಫಿಯನ್ನು ಬಟ್ಟಲಿಗೆ ಸುರಿಯುತ್ತ ಕೇಳಿದ: 'ಔರ್ ಕುಚ್ ಹೋನಾ, ಸಾಬ್?'

ನನ್ನ ಹುಬ್ಬುಗಳು ಪ್ರಶ್ನೆಗೆ ಉತ್ತರವಾಗಿ ಪ್ರಶ್ನೆಯನ್ನು ಕೇಳಿ ದವು.

ತಟ್ಟೆ, ಬಟ್ಟಲನ್ನು ಎತ್ತಿ ಕೈಗೆ ಕೊಡುತ್ತ ಉತ್ತರ ಕೊಟ್ಟ: 'ಖೂಬ್ ಸುರತ್ ಲಡಕೀ ಹೈ....ಬುಲಾವೂಂ?'

* * *

" ಏನು ಉತ್ತರ ಕೊಟ್ಟರಿ ಹುಡುಗನಿಗೆ ? '' ಎಂದು ಕೇಳಿದಳು ಚೇಷ್ಟೆಯಿಂದ.

" ಮತ್ತೇನು ? ಹುಬ್ಬೇರಿಸಿ ' ಬುಲಾವ್ ' ಎಂದೆ "

ಅನಿರೀಕ್ಷಿತವಾದ ಉತ್ತರ ಅವಳೆದೆಗೆ ಚಾವಟಿ ಏಟಾಯಿತು. ಕಣ್ಣು ನೋವಿನಿಂದ ಕಿರಿದಾಯಿತು. ವೇದನೆಯನ್ನು ತೋರಿಸಲಿಷ್ಟಪಡದೆ ಕಣ್ಣುಗಳು ನೆಲದೆಡೆ ಧಾವಿಸಿದವು. ಮೂಗಿನ ಅಡಿಯಿಂದ ಬಾಯ ತುದಿಗಳವರೆಗೆ ಎರಡು ಗೆರೆಗಳು ಕಾಣಿಸಿಕೊಂಡವು.

ನೆಲದಲ್ಲಿ ಲೀನವಾದ ಕಣ್ಣುಗಳನ್ನು ನೋಡಿ ಮೃದುವಾಗಿ ಅಂದ : "ಹಾಗೇಕೆ ಉತ್ತರಕೊಟ್ಟೆನೆಂದು ಗೊತ್ತಿಲ್ಲವೆ ನಿನಗೆ ? "

ಮೃದು ಧ್ವನಿ ನೋವನ್ನು ಕಡಿಮೆ ಮಾಡಿತು ಕುತೂಹಲ ಕಣ್ಣನ್ನು ಮೇಲಕ್ಕೆಬ್ಬಿಸಿತು.

" ಹುಡುಗನ* ಪ್ರಶ್ನೆಯನ್ನು *ಕೇಳಿ ರೋಷ *ಉಕ್ಕಿತು. ಆದರೆ ಮರು ಕ್ಷಣವೆ ಅದೊಂದು ಅಲ್ಲಿನ ರೂಢಿಯ ಪ್ರಶ್ನೆಯೆಂಬ ಅರಿವಾಗಿ ಸುಮ್ಮನಾದೆ....ಎಲ್ಲ ಬಲು ಅಗ್ಗ—ಸಾರಾಯಿ, ಸಿಗರೇಟು, ಸ್ತ್ರೀ.... ಮನ ನೊಂದಿತು.

ಹುಡುಗ ಇನ್ನೂ ನಿಂತಿದ್ದ. ೧೬-೧೭ ರ ಹುಡುಗ. ಎಣ್ಣೆಗೆಂಪು, ತೆಳು ಮೈ, ಸುಮಾರು ಎತ್ತರ; ಬಾಚಿದ ದಟ್ಟ ಕಪ್ಪು ಕೂದಲು; ಹೋಟಲಿನ ಗರಿ ಮುರಿಯ ಬಿಳಿ ಸಮವಸ್ತ್ರ; ಚುರುಕು ಮುಖಚರ್ಯೆ ....ಈ ವಯಸ್ಸಿಗಾಗಲೆ ಈ ವೃತ್ತಿ, ಇಷ್ಟು ಪಾಪದ ಅರಿವು! ಇವನಿಗೂ ನಮ್ಮ ಊರಿನ ಇದೇ ವಯಸ್ಸಿನ ಒಳ್ಳೆಯ ಮನೆತನದ ಹುಡುಗರಿಗೂ ಎಷ್ಟು ವ್ಯತ್ಯಾಸ!....ಇವನು ದಳ್ಳಾಳಿಯೆ? ಇವನಿಗೇನಾದರೂ ಸಂಬಧವೊ ಅವಳು ?

ಕೇಳಿಯೇ ಬಿಟ್ಟೆ.

ಉದಾಸೀನದಿಂದ ನಿಂತಿದ್ದ ಹುಡುಗನ ಕಣ್ಣು ಬೆಂಕಿಯಾಯಿತು. ಬಾಯಿ ಸೆಟೆದು ಉತ್ತರಿಸಿತು : ' ನನಗಿರುವವಳೊಬ್ಬಳೆ ಅಕ್ಕ. ಅವ

ಳಿಗೆ ಮದುವೆಯಾಗಿ ಮೂರು ಮಕ್ಕಳಿವೆ. ಅವಳ ಗಂಡ ಹಣ್ಣಿ ನಂಗಡಿ ಇಟ್ಟಿದ್ದಾನೆ. ನಾನು, ನಮ್ಮ ತಾಯಿ ಒಂದೆಡೆ ಇದ್ದೇವೆ; ನಮ್ಮ ತಂದೆ ತೀರಿಕೊಂಡು ಎರಡು ವರ್ಷಗಳಾದವು....ನಾವು ಸಭ್ಯ ಮನೆತನದವರು. ನೀವು ಹೀಗೆ ಕೇಳಬಾರದು.'

ಅಶುದ್ಧ ಉರ್ದುವಿನಲ್ಲಿ ವ್ಯಕ್ತಪಡಿಸಿದ ಅವನ ಸಾಭಿಮಾನವನ್ನು ಕಂಡು ಸಂತೋಷವಾಯಿತು. ಆದರೂ ಬಿಗಿಯಿಂದಲೆ ಹೇಳಿದೆ: 'ನೀನೇ ಕೇಳಿದೆಯಲ್ಲ; ಆದ್ದರಿಂದ ಹಾಗೆ ಊಹಿಸಿದೆ.'

ಭುಜ ಕದಲಿಸಿ ಉತ್ತರ ಕೊಟ್ಟ: ಹೋಟಲು ಮಾಲೀಕನ ಅಪ್ಪಣೆ ಅದು. ಅದೂ ಒಂದು ವ್ಯಾಪಾರ ಅವನದು. ಇದರಲ್ಲಿ ನಮಗೇನೂ ದಳ್ಳಾಳಿ ಸಿಗದು. ಹೋಟಲಿನ ಗಿರಾಕಿಗಳು ಹೊರಗಿನಿಂದ ಯಾವಳನ್ನಾದರೂ ಕರೆತಂದರೆ ಆತ ಆಗದೆನ್ನುತ್ತಾನೆ. ತನ್ನವರನ್ನೇ ಒಪ್ಪಿದರೆ ಸರಿ.'

ಹುಡುಗನ ಸಿನಿಕ ಮಾತು, ತಿರಸ್ಕಾರದಿಂದ ಬಿಗಿಯಾದ ಬಾಯಿ....ಹೊಸಬನಾದ ನನ್ನಲ್ಲಿ ಆದ ವೇದನೆ, ಬಳಕೆಯಾದ ಇವನಲ್ಲಿಲ್ಲ. ಈ ಜೀವನ ಕೃತಕವೆನಿಸುವುದಿಲ್ಲವೆ? ಅಸಹ್ಯವೆನಿಸುವದಿಲ್ಲವೆ? ಈ ಹುಡುಗನಿಗೆ ಔದಾಸೀನ್ಯ, ತಿರಸ್ಕಾರ; ಮಾಲೀಕನಿಗೆ ಅದೊಂದು ಹಣದ ಮೂಲ, ವ್ಯಾಪಾರದ ಅಂಗ; ಹೆಣ್ಣುಗಳಿಗೆ? ಅಭ್ಯಾಸದಿಂದ ಔದಾಸೀನ್ಯ ಬಂದುಬಿಟ್ಟಿರುತ್ತದೆಯೇ? ಏನೂ ಭಾವನೆಗಳೇ ಇರುವದಿಲ್ಲವೆ? ಅಥವಾ ಇರುತ್ತದೊ? ಕುತೂಹಲ ಹುಟ್ಟಿತು. 'ಬುಲಾವ್' ಎಂದೆ.

ಹುಡುಗನ ಸೂಕ್ಷ್ಮ ನಗೆಯ ಹಿಂದೆ ತಿರಸ್ಕಾರವಿತ್ತೆ? ಅಥವಾ ಅಷ್ಟೂ ಆಸಕ್ತಿ ಇಲ್ಲವೊ?

ಸಲಾಮು ಹಾಕಿ ಹೊರಗೆ ಹೋದ.... ಪಕ್ಕದ ಕೊಠಡಿಯಿಂದ ಟೆಲಿಫೋನ್ ಮಾಡಿದ ಸದ್ದಾಯಿತು.

ಮೇಜಿನ ಮೇಲೆ ಇಟ್ಟಿದ್ದ ಪುಸ್ತಕವನ್ನು ಕೈಗೆತ್ತಿಕೊಂಡೆ. ಓದ ಲಾಗಲಿಲ್ಲ....ಇದೇನು ಪ್ರಯೋಗ ನನ್ನದು ?

ಮೂರು ನಾಲ್ಕು ನಿಮಿಷಗಳಲ್ಲಿ ಹೋಟಲಿನ ಮುಂದೆ ಕುದುರೆ ಗಾಡಿ ನಿಂತ ಸಪ್ಪಳ.... ಆ ' ಮನೆ ' ಹತ್ತಿರದಲ್ಲೇ ಇರಬೇಕು. ! ....ಎದೆ ಬಡಿಯುತ್ತಿತ್ತು....ಮಹಡಿ ಮೆಟ್ಟಿಲ ಮರದ ಮೇಲೆ ' ಟಪ್ಪ, ಟಪ್ಪ ' ಸದ್ದು....ಏನದು? ಗುಂಡಿನೇಟಿನ ಸದ್ದು....ಆರಿರ ಚಳವಳಿಯ ನೆನಪು ...ಓ, ನಿಜ. ಹೈ ಹೀಲ್ಡ್ ಶೂ !

ಸದ್ದು ಹತ್ತಿರ, ಹತ್ತಿರ, ಹತ್ತಿರ ಬಂತು. ಕೊಠಡಿ ಬಾಗಿಲ ಬಳಿ ನಿಂತಿತು. ಎದೆ ಬಡಿತ ಕೇಳಿಸಲಾರದಷ್ಟು ಜೋರಾಗಿತ್ತು.... ಇಬ್ಬರ ನಡುವೆ ಒಂದು ಮರದ ಬಾಗಿಲು !.... ಆ ಕಡೆ ಏನಿದೆ ? ಹೇಗಿದ್ದಾಳೆ ?....ಅರಗಳಿಗೆಯಲ್ಲಿ ತಿಳಿಯುವುದು....

ಕುರ್ಚಿಯಿಂದ ಏಳಲಾಗಲಿಲ್ಲ .... ಬಾಗಿಲ ಮೇಲೆ ಬೆರಳ ಕುಣಿತ, ಏರು ಧ್ವನಿಯ ಪ್ರಶ್ನೆ : ' May I come in ? '

ಉತ್ತರ ಕೊಟ್ಟೆನೆ ? ನೆನಪಿಲ್ಲ. ಬಾಗಿಲಂತೂ ತೆರೆಯಿತು.... ಕೆಂಪು, ಕಪ್ಪು, ಬಿಳುಪು, ಉಬ್ಬು....ಬಾಗಿಲ ಮುಚ್ಚಿತು. ಬಾಗಿಲಿ ಗೊರಗಿ ಸ್ವಾಗತವನ್ನು ನಿರೀಕ್ಷಿಸುತ್ತ ನಿಂತಿದ್ದಳು ಹೆಣ್ಣು. ನಿರಾಶೆ ಯಿಂದ ಎದೆ ಬಡಿತ ನಿಧಾನವಾಯಿತು : ಕಣ್ಣಿನ ದೃಷ್ಟಿ ಸ್ಪಷ್ಟವಾ ಯಿತು. ಇವಳು—ಖೂಬ್ ಸೂರತ್ ? ಹುಡುಗನ ಸೌಂದರ್ಯಾವ ಲೋಕನದ ಮಟ್ಟ ಬಹಳ ಕೆಳಗಿರಬೇಕು....ಸಾಮಾನ್ಯ ಎತ್ತರ; ತೆಳು ವಾದ, ಮಾಸಿದ ಬಿಳಿ ಮೈ; ಭುಜದ ವರೆಗೂಹರಡಿದ ಕಪ್ಪು ಒರಟು ಕೂದಲು; ಕೃತ್ರಿಮ ಸಾಧನಗಳಿಂದ ಉಬ್ಬಿದ ಎದೆ, ಸಣ್ಣದಾದ ನಡು; ಸೊಂಟದಿಂದ ಒಂದೆಡೆ ನಸುಬಾಗಿದ ಮೈ. ವಯಸ್ಸು—ನಿರ್ಧರಿ ಸಲು ಕಷ್ಟ. ನನಗಿಂತ ಸ್ವಲ್ಪ ಚಿಕ್ಕವಳಿರಬಹುದು. ಆದರೂ ನನಗಿಂತ ದೊಡ್ಡವಳು... ತಲೆಕೂದಲು, ಹುಬ್ಬು ಕಪ್ಪು; ಬಾಯಿ, ಉಗುರು, ಲಂಗ, ಪಾದರಕ್ಷೆ, ಕೈಚೀಲ ಎಲ್ಲ ಕೆಂಪು; ದೊಡ್ಡ ಕತ್ತಿನ ಅಂಗಿ, ನಗೆ

ಪತಾಕೆ ಹಲ್ಲು ಬಿಳಿ; ಕಣ್ಣು ಕೆಂಪು-ಕಪ್ಪು.

ಏನಿದು ? ಹೆಣ್ಣು, ಸ್ತ್ರೀ, ಜೀವಿ ? ನನ್ನಂತೆಯೆ ಒಂದು ಜೀವಿ? ದೇಹದ ಜೊತೆಗೆ ಬುದ್ಧಿ, ಮನಸ್ಸು, ಆತ್ಮಗಳನ್ನು ಹೊಂದಿದ ಜೀವಿ? ....ಎಲ್ಲಿವೆ ಅವು ? ಬರಿ ದೇಹ ಕಾಣುತ್ತಿದೆ. ದೇಹದ ಮೂಲೆ ಮೂಲೆಯೂ ಸುಸ್ಪಷ್ಟ....ಮತ್ತೆಲ್ಲಿವೆ ಅವು? ಕಣ್ಣಿನಲ್ಲಿ? ಮುಖದಲ್ಲಿ ? ....ಮುಖವಲ್ಲ ಇದು—ಮುಖವಾಡ....ಕಣ್ಣು— ಏನೂ ಇಲ್ಲ ಅಲ್ಲಿ ಕಣ್ಣುಗುಡ್ಡೆಯನ್ನು ಬಿಟ್ಟು; ಕರಿವೃತ್ತದ ಸುತ್ತ ಸೂಕ್ಷ್ಮವಾದ ಕೆಂಪು ಗೀರುಗಳು....ಬರಿ ಬೊಂಬೆ, ಹಳೆ ಬೊಂಬೆ; ನೂರು ಜನರಾಡಿ ಬಿಸುಟ ಬೊಂಬೆ. ಕರ್ಪೂರದ ಬದಲು ಮೈ ಮಾಂಸ.

ಅಂಜಿಕೆ ದೇಹವನ್ನು ನಡುಗಿಸಿತು. ಕಂಪನವನ್ನು ಕಂಡು ಅದನ್ನೇ ಸ್ವಾಗತವೆಂದು ತಿಳಿದು ಮುಂದೆ ಬಂದಳು ಹೆಣ್ಣು....ಕೆಂಪು, ಕಪ್ಪು, ಬಿಳುಪು ಮುಂದೆ, ಮುಂದೆ, ಮುಂದೆ ಬಂದವು....ಕಡಿಮೆಯಾಗಿದ್ದ ಎದೆ ಬಡಿತ ಮತ್ತೆ ಜೋರಾಯಿತು....ಕೆಂಪು, ಕಪ್ಪು, ಬಿಳುಪು ಜೊತೆಗೆ ಕೃತಕ ರೇಷ್ಮೆಯ ನುಣುಪು; ನುಣುಪು ಕೊನೆಯಾದ ಕಡೆಯಿಂದ ಮೊದಲಾದ ಚರ್ಮದ ಒರಟು .... ವಾಸನೆ— ಜಾಸ್ಮಿನ್, ಬೆವರು, ಸಿಗರೇಟು, ಬೆವರು .. ತಲೆ ಸುತ್ತಿ ಬಂತು. ಮನಸ್ಸು ಚೀರಿ ಹಿಮ್ಮೆಟ್ಟಿತು, ಮೈ ಕುತೂಹಲದ ಕ್ರೌರ್ಯದಿಂದ ಮುಂಪೆ ಬಾಗಿತು. ಕೈಲಿದ್ದ ಪುಸ್ತಕ ನೆಲದ ಮೇಲೆ ಬಿತ್ತು....

* * *

ಕೆಂಪು ಬಾಯಿಂದ ಹೊರಟಿತು ಸುಲಭವಾಗಿ ಕೆಂಪು ಮಾತು : 'I love you' ಬೇಗ ಬಾಯ್ಮುಚ್ಚಿದೆ. ಈ ಕೊನೆಯ ಪೆಟ್ಟು ಬೇಡ. ಪ್ರಯೋಗಕ್ಕೆ ಕಾಲಿಟ್ಟ ದಿಟ್ಟತನಕ್ಕೆ ಶಿಕ್ಷೆ ಇದು—ಯಂತ್ರದ ಒಲವಿನ ಯಾತನೆ !

ದೀಪ ಹಚ್ಚಿ ಹಣವೆಣಿಸಿದೆ. ಯಾರಿಂದಲೂ ಮಾತಿಲ್ಲ. ಹಣದ ಝಣತ್ಕಾರ ನನ್ನ ಪಾಲಿನ ಕ್ಷಮೆಯು, ನೋವಿನ ನುಡಿಗಳಾದವು.

ಬೆಳ್ಳಿಯ ಗುಂಡಿನಲ್ಲಿ ನಾಟಿದ್ದ ಕಣ್ಣುಗಳಿಗೆ ಹೊಸ ಬೆಳಕು ಬಂತು. ಸಂಜೆಯಲ್ಲೆಲ್ಲಾ ಅವಳ ಮೊದಲಿನ ಭಾವ ಪ್ರದರ್ಶನ ನಾಳಿನ ಆಹಾರದ ಸಮಸ್ಯೆ ಕಳೆಯಿತು... ಹೆಚ್ಚು ಹಣ ಕೊಡಬೇಕೆನ್ನಿಸಿತು. ಆದರೆ ಹಿಂದೆಯೇ ಬರಬಹುದಾದ ಕೃತಜ್ಞತೆಯ ಪ್ರದರ್ಶನಕ್ಕೆ ಹೆದರಿ ಕೊಡಲಿಲ್ಲ.

ಹಣವನ್ನು ಚೀಲಕ್ಕೆ ತುರುಕಿದಳು. ಮೇಜಿಗೆ ಅಂಟಿಸಿದ್ದ ಕನ್ನಡಿಯಲ್ಲೊಮ್ಮೆ ಮುಖ ನೋಡಿಕೊಂಡು ಕೆದರಿದ ಎರಡು ಕೂದಲನ್ನು ಸರಿಪಡಿಸಿ ಹೊರಟು ಹೋದಳು. ಒಂದು ಮಾತಿಲ್ಲ; ಕಡೆಯ ಒಂದು ನಗೆಯೂ ಇಲ್ಲ.

ಇವಳಿಗೂ ತಿರಸ್ಕಾರವೆ?....ಹಾಗಾದರೆ ಭಾವನೆಗಳಿವೆಯೇನು? ಅಥವಾ ದುಡ್ಡು ಕೈಗೆ ಬಂದ ಮೇಲಿನ ಅಸಡ್ಡೆಯೊ?

ಏನು ಪ್ರಯೋಗ! ಉತ್ತರವೇನು? ಕಾಣೆ. ನಿಜಕ್ಕೂ ಕಾಣೆ. ಏನು ತಿಳಿಯಬೇಕೆಂದಿದ್ದೆ? ಏನು ತಿಳಿದೆ? ಏಕಾದರೂ ಪ್ರಯೋಗ ಮಾಡಿದೆ?.... ನಿಷ್ಫಲ ಪ್ರಯೋಗ .... ಇಲ್ಲ, ನಿಷ್ಫಲವಿರಲಾರದು. ನೆನಪು ಬಂದು ಎದೆ ನೊಂದಿತು. ನೋವು ಎಳೆ ನರಳಿನಲ್ಲಿ ರೂಪ ಗೊಂಡಿತು. ಮಂಚದ ಮೇಲೊರಗಲು ಮನಸ್ಸು ಬರಲಿಲ್ಲ. ಕುರ್ಚಿಯ ಮೇಲೆ ದೇಹವನ್ನೊಗೆದೆ. ಕಾಲಿಗೆ ಪುಸ್ತಕದ ಸ್ಪರ್ಶವಾಯಿತು. ಬಗ್ಗಿ ತೆಗೆದು ಮೇಜಿನ ಮೇಲಿಟ್ಟ ಕೈಗಳು ಕೊರೆದಿದ್ದ ಸಂಕಟವನ್ನು ಮುಚ್ಚಲು ಮುಖದೆಡೆ ಧಾವಿಸಿದವು...

ಪ್ರಯೋಗ ಫಲಕಾರಿಯಾಗಲಿಲ್ಲ. ನನಗೇನೂ ತಿಳಿಯಲಿಲ್ಲ.... ಆದರೂ ಕೆಲವೊಮ್ಮೆ ಏನೋ ತಿಳಿಯಿತೆನಿಸುತ್ತದೆ."

* * *

ಇಷ್ಟು ಕಾಲವೂ ಅವನ ಮುಖದಿಂದ ಕದಲದ ಅವಳ ಕಣ್ಣುಗಳು ದಿಗ್ಭ್ರಾಂತವಾಗಿ ಅಗಲವಾಗಿದ್ದವು. ಬಾಯಿ ಅಚ್ಚರಿಯಿಂದ, ಮೆಚ್ಚಿಕೆಯಿಂದ, ಗೌರವದಿಂದ ಸ್ವಲ್ಪ ತೆರೆದಿತ್ತು.

# ಮೈ ದಾ ಸ್

ಮಧ್ಯದ ಕೋಣೆಯಿಂದ ಹೊರಹೊಮ್ಮಿದ ಕೂಗು ಪ್ರಯೋಗ ಶಾಲೆಯನ್ನೆಲ್ಲಾ ಸುತ್ತಿತು. ಪ್ರಯೋಗಗಳಲ್ಲಿ ಮಗ್ನರಾಗಿದ್ದವರನ್ನೆಲ್ಲ ಮಧ್ಯದ ಕೋಣೆಗೆ ಎಳೆದು ತಂದಿತು.

ವಿಶಾಲವಾದ ಕೋಣೆಯ ತುಂಬ ವೈಜ್ಞಾನಿಕ ಉಪಕರಣ ಗಳು. ಒಂದು ಮೂಲೆಯಲ್ಲಿ ವಿದ್ಯುಚ್ಛಕ್ತಿ ಯಂತ್ರ. ಉಕ್ಕು, ಗಾಜು, ದೀಪದ ಹೊಳಪು. ಇವುಗಳ ಮಧ್ಯೆ ನಿಂತಿದ್ದ ವೈಜ್ಞಾನಿಕ ಸಂಶೋಧಕ. ಕೆದರಿದ ಕೂದಲು, ಉನ್ಮಾದದಿಂದ ಅಗಲವಾದ ಕಣ್ಣುಗಳು, ಎದೆ ತಾಳಕ್ಕೆ ಕುಣಿಯುತ್ತಿದ್ದ ಶರ್ಟು.

ಓಡಿಬಂದ ಸಹೋದ್ಯೋಗಿಗಳನ್ನು ಕುರಿತು ಹೇಳಿದ: "ಆಯಿತು ಆಯಿತು....ಎಂಟು ವರ್ಷ....ಆಯಿತು !" ಮುಂದೆ ಮಾತು ಹೊರಡ ಲಿಲ್ಲ.

ಸಹೋದ್ಯೋಗಿಗಳಿಂದ ಅಭಿನಂದನೆಗಳ ಸುರಿಮಳೆ. ಕೆಲವರು ಕೈ ಕುಲುಕಲು ಮುಂದೆ ಬಂದರು. ಚಾಚಿದ ಕೈಗಳನ್ನು ನೋಡಿ ಅಂದ: "ಮುಟ್ಟಬೇಡಿ, ಮುಟ್ಟಬೇಡಿ !" ಕೈಗಳು ಆಶ್ಚರ್ಯ ದಿಂದ ಕೆಳಗಾದವು. ಉತ್ತರವಾಗಿ ಹತ್ತಿರದಲ್ಲಿದ್ದ ಒಂದು ಗಾಜಿನ ಪಾತ್ರೆಯನ್ನು ಕೈಗೆತ್ತಿಕೊಂಡ. ಕೈ ಸ್ಪರ್ಶ ಪಡೆದ ಕೂಡಲೆ ಬಿಳಿ ಗಾಜು ಹೊನ್ನಿನ ಬಣ್ಣಕ್ಕೆ ತಿರುಗಿತು, ಪಾರದರ್ಶಕತೆ ಕಳೆದು ಕೊಂಡಿತು. ಕೈ ಹಿಡಿತ ಸಡಲಿಸಿದ. ಪಾತ್ರೆ ನೆಲಕ್ಕೆ ಬಿತ್ತು. ಆದರೆ ಒಡೆಯಲಿಲ್ಲ; ಬದಲು 'ಟಿನ್' ಎನ್ನುವ ಭಾರವಾದ ಶಬ್ದ ಬಂತು. ಈ ಪವಾಡವನ್ನು ನೋಡಿದವರೆಲ್ಲರಿಂದ ಹೊರಬಂದ ಮೆಚ್ಚಿಗೆಯ, ಅಸೂಯೆಯ ಉದ್ಗಾರಗಳ ಮೇಳ ವಿಜಯಿಯನ್ನು ಸುತ್ತುಗಟ್ಟಿತು.

ಎಂಟು ವರ್ಷಗಳ ಅವಿಶ್ರಾಂತ ಪರಿಶ್ರಮ ಇಂದು ಸಫಲ. ವಸ್ತುಗಳನ್ನು ಚಿನ್ನಕ್ಕೆ ಮಾರ್ಪಡಿಸುವ ವಿಧಾನವನ್ನು ಇಂದು ಕಂಡು ಹಿಡಿದಿದ್ದ. ಅನೇಕ ದ್ರಾವಕಗಳ ಮಿಶ್ರಣದಿಂದುಂಟಾದ ದ್ರವ್ಯವೊಂದನ್ನು ಕೈಗೆ ಉಜ್ಜಿಕೊಂಡು ವಿದ್ಯುಚ್ಛಕ್ತಿಯ ಪ್ರಬಲ 'ಶಾಕ್' ಕೊಡಿಸಿಕೊಂಡಿದ್ದ. ಬಳಿಕ ಕೈಸ್ಪರ್ಶ ಪಡೆದ ವಸ್ತುಗಳೆಲ್ಲ ಚಿನ್ನಕ್ಕೆ ತಿರುಗಿದ್ದವು! ದ್ರವ್ಯವನ್ನು ಇನ್ನು ತಯಾರು ಮಾಡಲಾಗದು; ಅದಕ್ಕೆ ಬೇಕಾದ ಕೆಲವು ಮೂಲಧಾತುಗಳು ಪ್ರಪಂಚದಲ್ಲಿ ತೀರಿದ್ದವು; ಇವನ ಕೈಯಲ್ಲಿ ಅಡಗಿತ್ತು ಶಕ್ತಿ!

ಪ್ರಯೋಗಶಾಲೆಯ ಪರೀಕ್ಷಕರ, ಮತ್ತಿತರ ಅಧಿಕಾರಿಗಳ, ವೈಜ್ಞಾನಿಕರ ಪ್ರಶಂಸೆ ದಿನಗಳನ್ನು ಮೊಟಕು ಮಾಡಿದವು. ಪಾರಿತೋಷಕಗಳು, ಅಭಿನಂದನ ಕೂಟಗಳು ತಿಂಗಳುಗಳಿಗೆ ವೇಗದ ಗಾಲಿಗಳನ್ನು ಕಟ್ಟಿದ್ದವು.

ಸರಕಾರದ ವೈಜ್ಞಾನಿಕ ಶಾಖೆಯಿಂದ ಹಣಕಾಸಿನ ವಿಭಾಗಕ್ಕೆ ವರ್ಗಾಯಿಸಲ್ಪಟ್ಟ. ಹಣಕಾಸಿನ ಮಂತ್ರಿ ವಿವೇಕಿ, ವಿವೇಚನಶಾಲಿ. ದೇಶದಲ್ಲಿ ಬಡತನವೆನ್ನುವುದೇ ಇಲ್ಲವಾಯಿತು.

* * *

ಚಿಕ್ಕಂದಿನಿಂದ ಜೊತೆಯಾಗಿದ್ದ ಕನಸು ಈಗ ನನಸು. ಐಶ್ವರ್ಯ, ಪದವಿ, ಗೌರವ ಅವನದು.

“ಮಗು, ಕಷ್ಟಪಟ್ಟು ಓದಪ್ಪ. ಚೆನ್ನಾಗಿ ಓದಿ ಪ್ಯಾಸ್ ಮಾಡಿದರೆ ಒಳ್ಳೆ ಕೆಲಸ ಸಿಕ್ಕತ್ತೆ. ತುಂಬ ದುಡ್ಡು ಸಂಪಾದಿಸಬಹುದು.” ತಾಯಿಯ ಮೃದು ಮಾತು. ತ್ರಾಣವಿಲ್ಲದ ಮೈಮಾತು ಮೃದು. “ಓದೋ ಚೆನ್ನಾಗಿ. ನಾನಂತೂ ಓದಿ ಮುಂದಕ್ಕೆ ಬರಲಿಲ್ಲ. ನೀನಾದರೂ ಬಾ. ನಿಮ್ಮ ದೊಡ್ಡಪ್ಪನ್ನ ಮೀರಿಸಬೇಡವೇ ?” ಗುಮಾಸ್ತ ತಂದೆಯ ಗಡುಸು ಧ್ವನಿ. ಮೇಲಧಿಕಾರಿಯಿಂದ ದಿನವೂ ಬಯ್ಯಿಸಿಕೊಂಡವರ ಧ್ವನಿ ಗಡುಸು.

ಒಟ್ಟಿ ಅಂಗಡಿಯಿಟ್ಟಿದ್ದ ಗರ್ವಶಾಲಿ ದೊಡ್ಡಪ್ಪನ ಬಳಿ ಎರಡು ಕಾರು.

ತಲೆಯಲ್ಲಿ ಬೇರೂರಿದ್ದ ಎರಡು ಧ್ವನಿಗಳು ಅವನ ಓದಿಗೆ ಮೀಟು ಗೋಲು. ಪ್ರತಿ ಪರೀಕ್ಷೆಯಲ್ಲಿಯೂ ಮೊದಲಿಗನಾದುದಕ್ಕೆ ಅವನಿಗೆ ಮನೆಯಲ್ಲಿ ಸಿಕ್ಕುತ್ತಿದ್ದ ಬಹುಮಾನ: ಆನಂದದಿಂದ ಗದ್ಗದವಾದ ತಾಯಿಯ ಮೃದು ಧ್ವನಿ; ಹೆಮ್ಮೆಯಿಂದ ಮೃದುವಾದ ತಂದೆಯ ಗಡುಸು ಧ್ವನಿ. ಒಂದು ಕ್ಷಣ. ಆಮೇಲೆ ಮತ್ತೆ ಪ್ರಾರಂಭ ಪಲ್ಲವಿ: "ಚೆನ್ನಾಗಿ ಓದಪ್ಪಾ....!"

ಚೆನ್ನಾಗೇ ಓದಿದ. ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲಿ ಜಯಶಾಲಿಯಾದ. ಸರ್ಕಾರಿ ಪ್ರಯೋಗ ಶಾಲೆಯಲ್ಲಿ ವೈಜ್ಞಾನಿಕ ಸಂಶೋಧಕನಾದ. ವಸ್ತುಗಳನ್ನು ಚಿನ್ನಕ್ಕೆ ತಿರುಗಿಸುವ ಮಾರ್ಗವನ್ನು ಕಂಡು ಹಿಡಿಯಬೇಕೆನ್ನುವುದು ಅವನ ಹಂಬಲ. ಕಾಲಕಾಲದಿಂದಲೂ ಜನರಿಂದ ಈ ಮಾರ್ಗದ ಬಗೆಗೆ ಸಂಶೋಧನೆ ನಡೆದಿತ್ತು. ಆದರೆ ಮಾರ್ಗ ಯಾರಿಗೂ ಸಿಕ್ಕಿರಲಿಲ್ಲ. ಅಸಾಧ್ಯವೆಂದೇ ಪರಿಗಣಿಸಲ್ಪಟ್ಟ ಈ ಅನ್ವೇಷಣೆಯ ಬಗೆಗೆ ಸಂಶೋಧನೆ ನಡೆಸಿದ. ಹಗಲಿರುಳೆನ್ನದೆ ದುಡಿದ. ಬೇರೆ ಏನು ವಿಷಯಕ್ಕೂ ಗಮನ ಕೊಡದೆ ದುಡಿದ. ಬುದ್ಧಿಸಾಮರ್ಥ್ಯದಿಂದ ಮೇಲಧಿಕಾರಿಗಳ ಮೆಚ್ಚಿಗೆಯನ್ನೂ, ಉತ್ತೇಜನವನ್ನೂ ಪಡೆದಿದ್ದನಾದರೂ ಇನ್ನೂ ಜಯ ದೊರಕಿರಲಿಲ್ಲ. ತಂದೆ ತಾಯಿ ಮಡಿದರು; ಕಡೆಯ ಮಾತು. "ಜಯ ಹೊಂದಪ್ಪ ದೊಡ್ಡ ಮನುಷ್ಯನಾಗು...." ಸಂಶೊಂಧನೆ ಮುಂದುವರಿಯಿತು.

ಕಡೆಗೆ ಜಯ ಸಿಕ್ಕಿತು; ದೊಡ್ಡ ಮನುಷ್ಯನಾದ.

ಹೊಸ ಉದ್ಯೋಗದಲ್ಲಿ ಕೆಲಸ ಬಹಳ ಸ್ವಲ್ಪ. ಮಂತ್ರಿ ಹೇಳಿ ಕಳುಹಿಸಿದಾಗ ಮಾತ್ರ ಸ್ವಲ್ಪ ಕೆಲಸ, ಅಷ್ಟೆ. ಮನೆಯಲ್ಲಿ ಪ್ರತಿಯೊಂದು ಕೆಲಸಕ್ಕೂ ಆಳುಗಳು. ಏನನ್ನೂ ಇವನು ಮುಟ್ಟಲಾಗದಲ್ಲ! ಕೈಗಳಿಗೆ ಯಾವಾಗಲೂ ಉಕ್ಕಿನ ಹೊದಿಕೆ. ವಿರಾಮ ಕಾಲ

ವನ್ನು ಹೇಗೆ ಕಳೆಯುವುದು? ಮಾಡಲು ಕೆಲಸವಿಲ್ಲ. ಮೀಟು ಕೋಲು ಮಾಯವಾಗಿತ್ತು.

ಜನರ ತಡೆಯಿಲ್ಲದ ಹೊಗಳುಮಳೆ, ಭಯಬೆರೆತ ದಾಸ್ಯವೃತ್ತಿ ಮೊದಲು ಚೆನ್ನ ಎನಿಸಿದರೂ ಬೇಸರ ಬಂದಿತ್ತು. ದೇಶದಲ್ಲಿ ಅತಿ ಉನ್ನತ ಅಧಿಕಾರ ಇವನದು; ಎಲ್ಲರಿಗಿಂತ ಹೆಚ್ಚಿನ ಮನ್ನಣೆ ಇವನಿಗೆ.

ಒಮ್ಮೆ ವಿಚಾರ ಬಂದಿತು: "ನಮ್ಮ ದೇಶ ಒಂದರಲ್ಲೇ ನಾನು ಸರ್ವಶಕ್ತನೇಕಾಗಬೇಕು? ಪ್ರಪಂಚವೆಲ್ಲ ನನ್ನದಾಗಬಹುದಲ್ಲವೇ ?"

ಎಲ್ಲ ದೇಶಗಳ ಮುಖಂಡರಿಗೆ ಅವನಿಂದ ಪತ್ರ ಹೋಯಿತು ತರ್ಕಬದ್ಧ, ವಿಚಾರಪೂರ್ಣ ವಾದಸರಣಿ. ತನ್ನ ಕೈಯ ನೆರಳಿದ್ದರೆ ಎಲ್ಲ ದೇಶಗಳಲ್ಲೂ ಬಡತನ ನಿರ್ಮೂಲ, ವಾಣಿಜ್ಯ, ಕೈಗಾರಿಕೆಗಳ ಪ್ರಗತಿ: ಎಲ್ಲೆಡೆ ಸುಖ, ಶಾಂತಿ!

ಮುಖಂಡರು ಕೂಡಲೆ ಒಂದು ಮಹಾ ಸಮ್ಮೇಳನದಲ್ಲಿ ಕಲೆತರು. ಯೋಜನೆಯನ್ನು ಪರಿಶೀಲಿಸಿದರು. ತಾವು ಒಂದು ವೇಳೆ ಯೋಜನೆಗೆ ಒಪ್ಪದಿದ್ದರೂ ಸ್ವಕೀಯರೆಲ್ಲ ಅಪಾರ ಹೊನ್ನಿನ ಆಸೆಗಾಗಿ ಅವನ ಬೆಂಬಲಿಗರಾಗುತ್ತಾರೆ. ಫಲಿತಾಂಶ: ಹೊಡೆದಾಟ, ದಂಗೆ, ರಕ್ತನದಿ. ಇದೆಲ್ಲ ಏಕೆ? ಸಂಕುಚಿತ ದೇಶಪ್ರೇಮವನ್ನು ತೊರೆಯಬೇಕು ಎಂದರು ಹೊನ್ನಿನ ಪ್ರಕಾಶದಿಂದ ಕಣ್ಣು ಮಂಜಾದ ಅನೇಕ ಹಿರಿಯ ಮುಂದಾಳುಗಳು. ಅಸಮ್ಮತಿ ಸೂಚಿಸಿದ ಕೆಲವು ದೇಶಗಳ ಬಾಯನ್ನು ಮುಚ್ಚಿದರು--ಹೊನ್ನಿನಿಂದಲೆ. ಹೊನ್ನಿನಿಂದಲೂ ಮುಚ್ಚಲಾಗದ ಒಂದೆರಡು ಬಾಯಿಗಳನ್ನು ಗುಟ್ಟಾಗಿ ಚಿನ್ನದ ಕಠಾರಿಯಿಂದ ಸೀಳಿದರು.

ಯೋಜನೆ ಸರ್ವಾನುಮತದಿಂದ ಅಂಗೀಕೃತವಾಗಿದೆ ಎಂದು ಘೋಷಿಸಿತು ಮಹಾ ಸಮ್ಮೇಳನ.

ಅಹಿಂಸಾ ಮಾರ್ಗದಿಂದಲೇ ಪ್ರಪಂಚವನ್ನೆಲ್ಲ ಗೆದ್ದ.

"ಭರತೇಶ ಏಕೆ ನನ್ನ ಮುಂದೆ ?"

ಪ್ರತಿ ದೇಶಕ್ಕೂ ಭೆಟ್ಟಿ ಕೊಟ್ಟ. ದೇವರಿಗಿಂತ ಹೆಚ್ಚಾಗಿ ಗೌರವ ವನ್ನು ದೊರಕಿಸಿಕೊಂಡ. ದೇವರು! ಒಮ್ಮೆ ಒಂದು ದೇವಾಲಯಕ್ಕೆ ಹೋಗಿ ಅಲ್ಲಿನ ಪ್ರಖ್ಯಾತ ಪೂಜಾಮೂರ್ತಿಗೆ ಹಸ್ತಲಾಘವ ದಯ ಪಾಲಿಸಿದ. ನಗುತ್ತ ಆಚೆ ಬಂದ. ಚಿನ್ನದ ಮೂರ್ತಿ ನೆರೆದಿದ್ದ ಜನಕ್ಕೆ ಬಹುಮಾನವಾಯಿತು. ಮುಂದೆ ಎಲ್ಲಾ ದೇಶಗಳಲ್ಲೂ ಇದು ಅವನ ಪದ್ಧತಿಯಾಯಿತು. ದೇವಾಲಯಗಳೆಲ್ಲ ಪಾಳು ಬಿದ್ದವು. ಹಿರಿಯರು ಹೌಹಾರಿದರು. ಫಾಸಿಸಂ ಆರಾಧಕ ಯುವಕ ತಂಡ ಅವರ ಬಾಯಿ ಮುಚ್ಚಿತು. ಪ್ರತಿಭಟಿಸಿದವರಿಗೆಲ್ಲ ನಗುತ್ತ ಹಸ್ತ ಲಾಘವ ಇತ್ತ.

ಪ್ರಪಂಚ ಅವನ ಹುಲ್ಲುಗಾವಲು. ಜನ ಅವನ ಕುರಿಮಂದೆ. ಮುಂದೇನು ?

ಖಗೋಳ ವಿಜ್ಞಾನದ ಶಾಲೆಗೆ ಒಂದು ದಿನ ಭೇಟಿಯಿತ್ತ. ಆಗ ಮುಂದಿನ ಹೆಜ್ಜೆ ಹೊಳೆಯಿತು. ಸೂರ್ಯ, ಚಂದ್ರ, ನಕ್ಷತ್ರಗಳು ಭೂಮಿಯಂತೆ ಗ್ರಹಗಳಷ್ಟೆ. ಭೂಮಿಯನ್ನು ಗೆದ್ದುದಾಯ್ತು. ಉಳಿದವುಗಳನ್ನು ಏಕೆ ಗೆಲ್ಲಬಾರದು ?

ವೈಜ್ಞಾನಿಕರು ಬಿಡುವಿಲ್ಲದೆ ದುಡಿದು ಅತಿ ವೇಗದ ವಿಮಾನ ವೊಂದನ್ನು ಸಿದ್ಧಪಡಿಸಿದರು. ಹೊನ್ನಿನ ಚೆಂಡಿನಂತೆ ಕಾಣುತ್ತಿದ್ದ ಸೂರ್ಯಗ್ರಹಕ್ಕೆ ಮೊದಲ ಭೇಟಿಯೆಂದು ನಿರ್ಧರಿಸಿದ. ಚಂದ್ರ ಮಂಕು; ನಕ್ಷತ್ರಗಳು ತುಂಬ ಚಿಕ್ಕವಾಗಿ ಕಾಣುತ್ತವೆ. ತನ್ನ ವಿಜಯ ರಂಗಕ್ಕೆ ಗ್ರಹಶ್ರೇಷ್ಠ ಸೂರ್ಯನೇ ಸರಿ ಎಂದು ಕೊಂಡ. ಸುಸಜ್ಜಿತವಾದ ವಿಮಾನವನ್ನೇರಿದ. ಹೋಗುವ ಮುನ್ನ ಒಂದು ಗುಂಪು ದಂಗೆಕಾರರ ಕೈ ಕುಲುಕಿದ. ಜನ ಇವನ 'ಜೋಕ' ನ್ನು ಕಂಡು ನಕ್ಕಿತು. ಜಯ ಜಯಕಾರವನ್ನು ಹಿಂದೆ ನೂಕುತ್ತ ಮೇಲೇರಿತು ವಿಮಾನ.

ಸೆಕೆಂಡಿಗೆ ಸಾವಿರಾರು ಮೈಲಿಗಳ ವೇಗ. ಸೆಕೆ ತಡೆಯಲಸಾಧ್ಯ

ವಾಯಿತು. ಮೈ ಬೆವರು ನೀರಿನಲ್ಲಿ ಮಿಂದಿತು. ಕೈಹೊದಿಕೆ ತೆಗೆದು ಹಾಕಿದ. ಒಂದು ನಿಮಿಷ ತಂಪೆನಿಸಿತು. ಮತ್ತೆ ಉರಿ ಉರಿ. ಬಟ್ಟೆ ತೆಗೆಯಲು ಕೈ ಹಾಕಿದ. ಬಟ್ಟೆ ಭಾರವಾಯ್ತು....ವಿಮಾನ ಮತ್ತೂ ಮೇಲೇರಿತು. ಸೂರ್ಯನ ಬಾಗಿಲಿಗೆ ಬಂತು. ನಿಲ್ಲಿಸುವ ಸ್ವಿಚ್ಚನ್ನ ದುಮಲು ಜಡವಾದ ಕೈ ಮುಂದೆ ಹೋಗುವ ಮುಂಚೆಯೆ ವಿಮಾನದ ಮೈ ಸೂರ್ಯನ ಅಂಚಿಗೆ ಡಿಕ್ಕಿ ಹೊಡೆಯಿತು. ವಿಮಾನ ಪುಡಿ ಯಾಯಿತು. ನಿರ್ಜೀವ ಚಿನ್ನದ ಬೊಂಬೆ ಗಾಳಿಯನ್ನು ತಳ್ಳುತ್ತ ಬಂದು ಸಮುದ್ರದ ತಳದಲ್ಲಿ ಬಿದ್ದಿತು.

# ಆವೇ ಮರೀಯಾ

ಪಾರ್ಕಿನ ಬೆಂಚನ್ನು ಬಿಟ್ಟೇಳುವ ಹೊತ್ತಿಗೆ ಅವನ ಮನಸ್ಸು ನಿರ್ಧಾರಕ್ಕೆ ಬಂದಿತ್ತು. ಹೊರಬರುವ ಮುನ್ನ ಮೂಲೆಯ ಮರವನ್ನು ದೃಷ್ಟಿಸಿದ. ತನ್ನ ಹೊಸ ಹಸಿರು ವಸ್ತ್ರವನ್ನು ರಾತ್ರಿಗೆ ದಾನಮಾಡಿ ಆದರ ಒರಟು ಕಪ್ಪು ಬಟ್ಟೆಯನ್ನು ಉಟ್ಟು ನಿಂತಿತ್ತು ಮರ. ಗೇಟನ್ನು ದಾಟಿ ಮನೆಯ ದಾರಿ ಹಿಡಿದ. .

ಎರಡು ತಿಂಗಳುಗಳಿಂದ ಅವನ ಮನಸ್ಸಿನಲ್ಲಿ ಅಶಾಂತಿ. ಬೇಡದ ಒಡನಾಡಿಯನ್ನು ಹೊರದೂಡಲು ಪ್ರಯತ್ನಿಸಿ ವಿಫಲನಾಗಿದ್ದ. ಇಂದು, ಇದೀಗ ಮಾರ್ಗ ಹೊಳೆದಿತ್ತು.

''ಮನೆ ಸೇರಿದೊಡನೆಯೆ ತಾಯಿಗೆ ಹೇಳಿಬಿಡಬೇಕು: 'ಅಮ್ಮ ನಾನು ಮದುವೆಯಾಗುವುದಿಲ್ಲ.' ಅವಳಿಗೆ ಉಂಟಾಗುವ ನೋವು, ನಿರಾಶೆಗಳನ್ನು ಲಕ್ಷಿಸದೆಯೆ ಹೇಳಿ ಬಿಡಬೇಕು. 'ಅಮ್ಮ ನಾನು ಮದುವೆಯಾಗುವುದಿಲ್ಲ.'....ಇನ್ನು ಮುಂದೆ ಮರಿಯಾಳಿಂದ ದೂರ ಇರಬೇಕು. ಪ್ರತಿದಿನ ಸಂಜೆ, ಕಚೇರಿ ಮುಗಿದ ಕೂಡಲೆ ಅವಳೆಡೆ ಹೋಗುವುದನ್ನು ಬಿಡಬೇಕು. ಅವಳ ನೊಂದ ಧ್ವನಿ ಫೋನ್ ತಂತಿಯನ್ನು ಹತ್ತಿ ಬಂದಾಗ ನಿರಾಸಕ್ತಿಯ ಧ್ವನಿಯಲ್ಲಿ ಉತ್ತರಿಸಬೇಕು. ಇದರ ಅರ್ಥ ಆ ಸೂಕ್ಷ್ಮ ಹೃದಯಿಗೆ ಬೇಗ ತಿಳಿಯುತ್ತದೆ. ಮುಂದೆ ಅವಳ ನೋವು ಅವಳಲ್ಲಿಯೇ ಉಳಿಯುತ್ತದೆ. ಧ್ವನಿಯ ಮೂಲಕ ಹೊರಬಂದು ಟೆಲಿಫೋನ್ ತಂತಿಯುದ್ದ ಹರಿದು, ನನ್ನನ್ನು ಸೇರುವುದಿಲ್ಲ; ಸೇರಿ ನನ್ನ ಎದೆ ತಂತಿಗಳನ್ನು ಮೀಟುವುದಿಲ್ಲ; ಮೀಟಿ, ತಂತಿಗಳ ಮೇಲೆ ಮಲಗಿದ್ದ ಶೋಕಗೀತೆಯನ್ನು ಹೊರಗೆಳೆಯುವುದಿಲ್ಲ. ....ಇನ್ನು ನಾನು? ವೀಣೆಗಾಗಿ ಹಂಬಲಿಸುವುದನ್ನು ಬಿಡಬೇಕು.

ಥಾಡಿಗಾಗಿ ಹಾತೊರೆಯುವುದನ್ನು ನಿಲ್ಲಿಸಬೇಕು. ವೀಣೆಯ ತಂತಿ ಸವೆಯುತ್ತದೆ, ಹಾಡು ಹಳೆಯದಾಗುತ್ತದೆ, ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರಬೇಕು."

* * *

ಅವನಿಗೆ ಮರಿಯಾಳ ಪರಿಚಯವಾಗಿ ಆರು ತಿಂಗಳಾಗಿದ್ದವು. ಪತ್ರಿಕಾ ಸಮ್ಮೇಲನ ಒಂದರಲ್ಲಿ ಅವಳನ್ನು ಮೊದಲು ಕಂಡಿದ್ದ. ಅದು ಅವಳ ಕೆಲಸದಲ್ಲಿ ಮೊದಲನೆಯ ಮುಖ್ಯ ಸಂದರ್ಶನವಾಗಿತ್ತು. ಸಹೋದ್ಯೋಗಿಗಳು ಹೊಸ ಮುಖವನ್ನು ಸ್ವಾಗತಿಸಿದ್ದರು. ಮುಖ ಚೆಲುವಾಗಿದ್ದದ್ದರಿಂದ ಸ್ವಾಗತ ಉತ್ಸುಕಿತವಾಗಿತ್ತು. ಘಾಬರಿಯಿಂದ ಬೆವತಿದ್ದ ಮುಖ ಅಂದು ತಿರುಗಿದುದು ಅವನೆಡೆಗೆ. ಇನ್ನೂ ಅವನೆಡೆಗೆ ತಿರುಗಿತ್ತು— ಈಗ ಘಾಬರಿ ಇಲ್ಲದಿದ್ದರೂ.

ಆಕರ್ಷಣೆ ಒಲವಿಗೆ ತಿರುಗಲು ಬಹು ಕಾಲ ಹಿಡಿದಿರಲಿಲ್ಲ. ಜೊತೆಗೆ ಕೆಲಸ ಮಾಡುತ್ತಿದ್ದ ಹುಡುಗಿಯರ ಬಗೆಗೆ ಅವನು ತಳೆದಿದ್ದ ತಿರಸ್ಕಾರ ಭಾವನೆಯನ್ನು ಅವರಿಂದ ಬಹು ಭಿನ್ನವಾದ ಅವಳ ಸ್ವಭಾವದ ಪರಿಚಯ ಆಗುತ್ತ ಬಂದಂತೆ, ಅವಳ ಬಗೆಗೂ ತಳೆಯುವುದು ಅಸಾಧ್ಯವಾಯಿತು. ಒಲವು ಬೆಳೆದಂತೆ ಸಹವಾಸದ ಆಗತ್ಯ ಹೆಚ್ಚಾಗತೊಡಗಿತು. ಕೂಡುವ ಬಯಕೆ, ಕೂಡಿರುವ ಬಯಕೆ ತೀಕ್ಷ್ಣವಾಗತೊಡಗಿತು.

ಮದುವೆಗೆ ಹೊರಗಿನ ಅಡ್ಡಿಗಳೇನೂ ಇರಲಿಲ್ಲ. ತಾಯಿ-ತಂದೆ ಆದರಲ್ಲೂ ತಾಯಿ-ಅವನನ್ನು ಮದುವೆಯಾಗೆಂದು ವರ್ಷಗಳಿಂದ ಹೇಳುತ್ತಿದ್ದರು. ಮೆಚ್ಚಿದ ಹೆಣ್ಣನ್ನು ಮದುವೆಯಾಗುವ ಸ್ವಾತಂತ್ರ್ಯ ಅವನಿಗಿತ್ತು. ಹೆಂಡತಿಯನ್ನು ಸಾಕುವಷ್ಟು ಸಂಬಳ ದೊರಕುತ್ತಿತ್ತು. ಮತ್ತೆ ಮರಿಯಾ? 'ಮಿಸ್ಟರ್ ' ರಾಡರಿಗ್ಸ್', ಟೋನಿ'ಗೆ ದಾರಿ ಮಾಡಿಕೊಟ್ಟು ಬಹಳ ದಿನಗಳಾಗಿದ್ದವು. 'ಟೋನಿ'ಯನ್ನು ತುಂಬಿದ್ದ ಮಾರ್ದವ ಸಂದೇಹವನ್ನು ದೂರ ಮಾಡುತ್ತಿತ್ತು.

ಹೊರಗಿನ ಅಡ್ಡಿಗಳೇನೂ ಇರಲಿಲ್ಲ. ಅಡ್ಡಿಗಳೆಲ್ಲವೂ ಅವನಿಂದಲೇ ಬಂದವುಗಳಾಗಿದ್ದವು. ಅಪೇಕ್ಷೆಯೂ ಅವನದೇ, ಅಡ್ಡಿಯೂ ಅವನದೇ.

ಅವನ ಮನೆಯ, ಇತರ ಮನೆಗಳ ಸಂಸಾರಗಳನ್ನು ಪರಿಶೀಲಿಸಿದ ಅವನಿಗೆ ಮದುವೆಯ ಬಗ್ಗೆ ಜಿಗುಪ್ಸೆಯಿತ್ತು, ತಿರಸ್ಕಾರವಿತ್ತು. ದಾಂಪತ್ಯ ಸುಖದ ಅಶಾಶ್ವತೆಯನ್ನು ಕಂಡು ಮದುವೆಯ ಬಗೆಗೆ ಅನಾದರ, ಅನಾಸಕ್ತಿಗಳನ್ನು ತಾಳಿದ್ದ.

ಮನೆಯಲ್ಲಿ ವಯಸ್ಸಾದ ತಂದೆ, ತಾಯಿ. ಇಬ್ಬರ ನಡುವಿನ ಸಂಬಂಧ ಔದಾಸೀನ್ಯ. ಅವನಿಗೆ ನೆನಪು ಇದ್ದಾಗಿನಿಂದ ಹೀಗೆಯೇ. ತಂದೆಯ ದಿನಗಳನ್ನು ಕಚೇರಿ,ಕ್ಲಬ್ಬುಗಳು ತುಂಬುತ್ತಿದ್ದವು.ತಾಯಿಯ ದಿನದ ಬಹು ಭಾಗವನ್ನು ಅಡಿಗೆಮನೆ ಎಳೆಯುತ್ತಿತ್ತು. ಮಗಳ ಮದುವೆಯಾದಾಗಿನಿಂದ ಆಕೆಗೆ ಬಹಳ ಬೇಸರವಾಗಿತ್ತು. ಮನೆಯಲ್ಲಿ ಇನ್ನೊಂದು ಹೆಣ್ಣು ಜೀವಕ್ಕಾಗಿ ಆಕೆ ಹಂಬಲಿಸುತ್ತಿದ್ದಳು.

ಅವನ ತಂಗಿ: ಅವಳು ಟೈಪಿಸ್ಟ್ ಆಗಿದ್ದ ಕಚೇರಿಯಲ್ಲಿಯೇ ಕೆಲಸ ಮಾಡುತ್ತಿದ್ದವನೊಬ್ಬನನ್ನು ಪ್ರೇಮಿಸಿದ್ದಳು; ಮದುವೆಯಾಗಿದ್ದಳು. 'ನನಗಿನ್ನೂ ಬಹಳ ಚಿಕ್ಕ ವಯಸ್ಸು. ಇನ್ನೊಂದೆರಡು ವರ್ಷ ತಡಿ', ಎಂದು ಬುದ್ಧಿವಾದ ಹೇಳಿದ ತಂದೆ, ತಾಯಿಯರ ಮಾತನ್ನು ಕೇಳದೆ ಮದುವೆಯಾಗಿದ್ದಳು; ಸಂಸಾರ ಹೂಡಿದ್ದಳು. ತೌರಿನಲ್ಲಿ ನೆಲೆಸಿದ್ದ ಬಡತನವನ್ನು ತನ್ನ ಮನೆಗೂ ಒಯ್ದಿದ್ದಳು.

ಮದುವೆಯಾದ ಹೊಸದರಲ್ಲಿ ಬಡತನವನ್ನು ಮರೆಸುವಷ್ಟು ಆನಂದ ಅವಳ ಮನೆಯನ್ನು ತುಂಬಿದ್ದಿತು. ಕಾಲ ಆನಂದವನ್ನು ಹೊರದೂಡಿತ್ತು. ಮಕ್ಕಳು, ಖಾಯಿಲೆ, ಅವಳ ಅತ್ತೆ, ಮಾವನ ಸಾವು; ಮಕ್ಕಳು, ಖಾಯಿಲೆ; ಮಕ್ಕಳು, ಖಾಯಿಲೆ.

ಈಗ ಅವರಿಬ್ಬರೂ ಯಂತ್ರದ ಗೊಂಬೆಗಳು. ಉಲ್ಲಾಸವನ್ನರಿಯದ, ಬೇಸರ ಮುಖದ ಯಂತ್ರಗಳು. ಸಣ್ಣ ಮನೆ ತಿಪ್ಪೆ.

ಮನೆ ತುಂಬಿದ ಮಕ್ಕಳು ತಿಪ್ಪೆಯ ಮಕ್ಕಳು. ಐದು ವರ್ಷಗಳ ಹಿಂದಿನ ಹಕ್ಕಿ ಮರಿ ಈಗ ಹೊಟ್ಟೆಗೆ ಸಾಲದ ಕಾಗೆ; ರೇಗಿದಾಗ—ರೇಗಿದಾಗ ಹೊಟ್ಟೆಗೆ ಸಾಲದವರಿಗೆ ರೇಗು ಹೆಚ್ಚು—ರಣಹದ್ದು. ಅಣ್ಣನಿಗಿಂತ ನಾಲ್ಕು ವರ್ಷ ಚಿಕ್ಕವಳಾದರೂ ಅವನಿಗಿಂತ ವಯಸ್ಸಾದವಳಂತೆ ಕಾಣುತ್ತಿದ್ದಳು. ಮುಖದ ಮೇಲೆ ಸುಕ್ಕಿನ ಬಲೆ, ಕತ್ತಿನ ಸುತ್ತ ಕಾಗೆಯ ಕಾಲಿನ ಸರ. ತಾಯಿ ಅಣ್ಣ ಇಬ್ಬರ ಮನಸ್ಸನ್ನೂ ಉಲ್ಲಾಸ ಗೊಳಿಸುತ್ತಿದ್ದ ನಗು ಮುಖದ ಹುಡುಗಿ ಈಗ ಹುಬ್ಬುಗಂಟಿನ, ಬಿಗಿ ಬಾಯಿಯ ಹೆಂಗಸು.

ಅವನ ವಿವಾಹಿತ ಸಹೋದ್ಯೋಗಿಗಳ ಮನೆಗಳಲ್ಲೂ ಇದೇ ವಿಷಮ ಪರಿಸ್ಥಿತಿ. ಮನೆ ಹೆಂಗಸರ ಮಾತಿನ ಮುಖ್ಯ ವಿಷಯ ಹಣದ ಅಸಹಕಾರ: ಯಾವುದಕ್ಕೂ ಬೆಲೆ ಇಲ್ಲದ ಈ ಕಾಲದಲ್ಲಿ ಎಲ್ಲದಕ್ಕೂ ಬೆಲೆ ಹೆಚ್ಚು. ಅವರ ಮಾತಿನಿಂದ ಬೇಸರ ಅನಿವಾರ್ಯ. ಬೇಸರದ ಹಿಂದೆಯೇ ಹರಿದು ಬರುತ್ತಿದ್ದ ಕನಿಕರದ ನೋವಿನಿಂದ ತಪ್ಪಿಸಿಕೊಳ್ಳಲು ಅವನು ಸಾಧ್ಯವಾದಷ್ಟೂ ಅವರ ಮನೆಗಳಿಗೆ ಹೋಗು ತ್ತಿರಲಿಲ್ಲ. ಕಚೇರಿಯಲ್ಲಿ ಉಲ್ಲಾಸಭರಿತರಾಗಿದ್ದ ಯುವಕರಿಗೆ ಮನೆಯ ಹೊಸಿಲು ದಾಟಿದ ಕೂಡಲೆ ರೇಗು, ಅವಮಾನ. ಅವಮಾನ ದಿಂದಾಗಿ ರೇಗು; ರೇಗಿನಿಂದಾಗಿ ಅವಮಾನ. ಮಧ್ಯವಯಸ್ಸಿನವರ ಕಚೇರಿಯ ನಗುಮುಖಗಳು ಮನೆಯಲ್ಲಿ ಚಿಂತಾಕ್ರಾಂತ, ಹತಾಶೆ ಯಿಂದ ಬಿಗಿ.

ಪ್ರತಿ ಮನೆಯಲ್ಲಿಯೂ ಇದೇ ಚಿತ್ರ.

ಚಿತ್ರದ ಸಾಲುಗಳನ್ನು ನೋಡಿಯೂ ಮತ್ತೆ ತಾವೂ ಒಂದು ಅಂತಹದೇ ಚಿತ್ರವನ್ನು ಬರೆಯಲು ತೊಡಗುವ ಮೂರ್ಖರಲ್ಲಿ ತಾನೂ ಒಬ್ಬನಾಗಬಾರದೆಂದು ಅವನು ನಿರ್ಧರಿಸಿದ್ದ.

ಆದರೆ ಒಲವು? ಆದರೆ ಹೆಣ್ಣು? ಆದರೆ ಸಹವಾಸದ ಬಯಕೆ?

ದೇವಕಣಿಗಲೆ. ಮೊಗ್ಗು ಉಗುರು; ಹೊಸ ನಿಂಬೆ ಹೂ ಉಸಿರು;

'ಟೋನಿ', 'ಟೋನಿ'!

ನಿರ್ಧಾರವನ್ನು ಮೊಗ್ಗು ಉಗುರು ಕಿತ್ತು ಬೀಸಾಡಿತ್ತು; ಹೂ ಉಸಿರು ದೂರ ಹಾರಿಸಿತ್ತು.

ತಿಂಗಳ ಮೊದಲಿನಲ್ಲಿ ಸಂಬಳದ ಜೊತೆಗೆ ಸಿಕ್ಕಿದ್ದ ಉಚಿತಾರ್ಥ ದಲ್ಲಿ ಒಂದು ಉಂಗುರವನ್ನು ಕೊಂಡಿದ್ದ. ಮರಿಯಾಳ ಬಳಿ ಹೋಗಿ ಪ್ರಶ್ನೆ ಹಾಕುವುದು; ಸಿರೀಕ್ಷಿತ ಉತ್ತರ ಬಂದ ಕೂಡಲೆ ಉಂಗುರ ವನ್ನು ಅವಳ ಬೆರಳಿಗೆ ಸುತ್ತುವುದು; ತೋಳನ್ನು ಸೊಂಟಕ್ಕೆ ಸುತ್ತು ವುದು....ಏನೇನೋ ಕನಸುಗಳನ್ನು ಕಟ್ಟಿದ್ದ. ತಿಂಗಳಿನ ಮೊದಲ ವಾರದ ಕನಸುಗಳು; ಒಲವಿನ ಮೊದಲ ತಿಂಗಳ ಕನಸುಗಳು.

ಈಗ ತಿಂಗಳ ಕೊನೆಯ ವಾರ. ಕನಸುಗಳು ಕನಸುಗಳಾಗೇ ಉಳಿದಿದ್ದವು. ಉಂಗುರ ಇನ್ನೂ ಶರಾಯಿ ಜೇಬಿನಲ್ಲಿಯೇ ಇದ್ದಿತು.

ಕನಸನ್ನು ನನಸಾಗಿಸಬಾರದು ಎಂದು ಕೊಂಡಿದ್ದ, ಸ್ನೇಹಿತ ನೊಬ್ಬನ ಜೀವನದ ಬಗ್ಗೆ ತಿಳಿದಾಗ, ನಾಲ್ಕು ವರ್ಷಗಳ ಕೆಳಗೆ ಮದುವೆಯಾದ ಆತ ಬೇರೆ ಊರಿನಲ್ಲಿ ಹೊಸ ಕೆಲಸ ಹಿಡಿದಿದ್ದ. ಕಳೆದ ವಾರ ಬೊಂಬಾಯಿಗೆ ಬಂದಾಗ ಹಳೆಯ ಸಹೋದ್ಯೋಗಿ ಗಳನ್ನು ನೋಡಲು ಕಚೇರಿಗೆ ಬಂದಿದ್ದ. ಸ್ನೇಹಿತರಿಗೆ ಮೊದಲು ಅವನ ಗುರುತೇ ಸಿಕ್ಕಲಿಲ್ಲ. ಅವರಿಗೆ ಪರಿಚಯವಿರದ ಸಿರಿವಂತಿಕೆ ಅವನ ವೇಷಭೂಷಣಗಳಲ್ಲಿ, ಮಾತಿನಲ್ಲಿ, ನಡೆವಳಿಕೆಯಲ್ಲಿ ಸುವ್ಯಕ್ತ ವಾಗಿತ್ತು ಗೆಳೆಯರನ್ನು ಮುತ್ತಿದ ಅಸೂಯೆ ಇವನನ್ನೂ ಆವರಿ ಸಿತ್ತು—ಗೆಳೆಯನ ಅಂತರಂಗದ ಮಾತುಗಳನ್ನು ಕೇಳುವತನಕ.

ತನ್ನ ದಾಂಪತ್ಯ ವಿರಸವನ್ನು ಗೆಳೆಯ ಇವನಿಗೆ ತಿಳಿಯ ಪಡಿಸಿದ್ದ. ಪರಸ್ಪರ ಪ್ರೇಮಿಸಿ ಮದುವೆಯಾದ ಗಂಡಹೆಂಡಿರ ನಡುವೆ ಈಗ ಒಂದು ತೆರೆ ಬಂದು ನಿಂತಿತ್ತು. ಮಕ್ಕಳನ್ನು ಬಹಳವಾಗಿ ಬಯಸುತ್ತಿದ್ದ ಅವರಿಗೆ ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಕ್ಕಳಿರಲಿಲ್ಲ. ಹಾಸ್ಯ ಚಿಂತೆಗೆ ದಾರಿ ಮಾಡಿತ್ತು. ಮೂಕ ಅಪಾ

ದನಿಗಳು ಕಾರಣವಿಲ್ಲದ ಸಿಟ್ಟಿನಲ್ಲಿ ರೂಪಗೊಂಡಿದ್ದವು.

ಅಂದೇ ಸಂಜೆ ತಂಗಿಯ ಮನೆಗೆ ಹೋಗಿದ್ದ. ಮಕ್ಕಳ ಅಳು ಇವನನ್ನು ಸ್ವಾಗತಿಸಿತ್ತು. ಜಗಳವಾಡಿ ಅಳುತ್ತಿದ್ದ ಮಗು; ರೇಗಿದ ತಾಯಿಯ ಕೈಯಿಂದ ಏಟು ತಿಂದು ಅಳುತ್ತಿದ್ದ ಮಗು; ಬೇಡಿದ ತಿಂಡಿ ಸಿಕ್ಕದೆ ಅಳುತ್ತಿದ್ದ ಮಗು; ಜ್ವರದಿಂದ ಬಳಲಿ ಅಳುತ್ತಿದ್ದ ಕೈ ಮಗು. ಈ ಶೋಕಮೇಳ ಅವನನ್ನು ಕಲಕಿತ್ತು. ಕಲಕಿದಫಲವಾಗಿ ಮೇಲೆದ್ದ ಅಶಾಂತಿ ಅಲೆ ಮುಖದ ಮೇಲೆ ದಟ್ಟವಾಗಿ ಹರಡಿತ್ತು. ಅಣ್ಣನಿಗೆ ಆದ ಬೇಸರದ ಅರಿವಾಗಿ, ತಂಗಿಯ ಕಣ್ಣು ತುಂಬಿ ಬಂದಿತ್ತು.

ಹಣವಂತ ಗೆಳೆಯನಿಗೆ ಮಕ್ಕಳಿಲ್ಲದ ಚಿಂತೆ; ಹಣ ಸಾಲದ ತಂಗಿಗೆ ಮಕ್ಕಳು ಹೆಚ್ಚಾದ ಚಿಂತೆ.

ಮನೆಯಲ್ಲಿ ತಂದೆಯ ಗ್ರಾಫ್ ಕಾಗದದ ಮುಖ; ತಾಯಿಯ ಜೋತು ಬಿದ್ದ, ಸೋತು ಬಿದ್ದ ದೇಹ.

ಮರಿಯಾಳ ಜೊತೆಯಲ್ಲಿ ಕಳೆಯಬೇಕಾಗಿದ್ದ ಸಾಯಂಕಾಲವನ್ನು ತನ್ನ ಕೋಣೆಯ ಏಕಾಂತತೆಯಲ್ಲಿ ಕಳೆಯಲು ಯತ್ನಿಸಿದ. ಮಕ್ಕಳ ಅಳು, ತುಂಬಿ ಹರಿದ ಕಣ್ಣು, ಸೋತ, ಸಾಯುತ್ತಲಿದ್ದ ಮುಖ, ಮೈ ಇವುಗಳ ಪ್ರತಿಧ್ವನಿ ಅವನನ್ನು ಎಬ್ಬಿಸಿ ಆಚೆಗೆ ಕಳುಹಿಸಿದ್ದವು. ಗುರಿಯಿಲ್ಲದೆ ನಡೆದಿದ್ದ ಕಾಲುಗಳನ್ನು ಕಚೇರಿಯ ಬಳಿಯ ಪಾರ್ಕಿನ ಕಡೆ ತಿರುಗಿಸಿದ್ದ.

ಅಂದಿನಿಂದ ದಿನವೂ ಸಂಜೆ ಪಾರ್ಕಿಗೆ ಬಂದು ಕುಳಿತುಕೊಳ್ಳುವ ರೂಢಿಯಾಗಿದ್ದಿತು. ಅಲ್ಲಿಗೆ ಅವನನ್ನು ಎಳೆದು ತರುತ್ತಿದ್ದ ಸೂಜಿಗಲ್ಲು ಮೂಲೆಯೊಂದರಲ್ಲಿ ಬೆಳೆದು ನಿಂತಿದ್ದ ಒಂದು ಮರ. ಕಚೇರಿಯಲ್ಲಿ ಅವನು ಕುಳಿತುಕೊಳ್ಳುತ್ತಿದ್ದ ಸ್ಥಳದಿಂದ ಸ್ಪಷ್ಟವಾಗಿ ಕಾಣುತ್ತಿತ್ತು. ಅನೇಕ ಬಾರಿ ಟೈಪ್ ಮಾಡುವುದನ್ನು ನಿಲ್ಲಿಸಿ ಅದನ್ನು ನೋಡುತ್ತ ಕುಳಿತಿರುತ್ತಿದ್ದ. ಚೆನ್ನಾಗಿ ಪರಿಚಯವಾಗಿದ್ದ ಅದರ ಸೌಂದರ್ಯದ ಪ್ರಕಾರಗಳು ಈಗ ಅವನಿಗೆ ಸಾಂಕೇತಿಕವಾಗಿ ಕಾಣಿಸತೊಡಗಿದ್ದವು.

ತಿಂಗಳ ಕಾಲ ಒಣ ಕಂದು ಬಣ್ಣದ ಕೈಗಳನ್ನು ಚಾಚಿ ನಿಂತಿತ್ತು ಮರ, ಬಟ್ಟೆ ಹರಿದ ಕೊಡೆಯಂತೆ. ಹೇಮಂತ ಬಿರಿಸಿದ ಕೈಗಳಿಗೆ ಚೈತ್ರ ಕೊಬ್ಬರಿ ಎಣ್ಣೆ ಸವರಿತ್ತು; ಬಳೆಗಾರ ವಸಂತ ಕೆಂಪು ಬಳೆಗಳನ್ನು ತೊಡಿಸಿದ್ದ....ಕೊಂಬೆ ಕೊಂಬೆಯೂ ಕೆಂಪು ಹೂಗಳನ್ನು ಹೊರಚಲ್ಲಿತ್ತು. ಕೆಂಪು ಮಾಸುವ ಹೊತ್ತಿಗೆ ವೈಶಾಖ ಮರದ ಮೇಲೆ ಹಸಿರಿನ ಮಳೆ ಕರೆದಿತ್ತು. ಈಗ ಮರದ ತುಂಬ ಹೊಳಪಿನ, ಹುರುಪಿನ ಎಳೆಹಸಿರು ಎಲೆಗಳು. ಬಿಸಿಲಿನಲ್ಲಿ ಮರದ ತಲೆ ನೊರೆ, ನೊರೆ: ಹಸಿರು ಛಾಯೆ ಕೊಡಿಟ್ಟ ಉದ್ದದ ಗಾಜಿನ ಲೋಟದಲ್ಲಿ ಶ್ಯಾಂಪೇನ್. ಇನ್ನೆರಡು ತಿಂಗಳುಗಳಲ್ಲಿ ಎಲೆಗಳ ಬಣ್ಣ, ಗಾತ್ರ ಎರಡೂ ದಪ್ಪನಾಗಿರುತ್ತವೆ: ರೋಗಿ ಕುಡಿಯುದ ಗಂಜಿ.

ವಸಂತದಲ್ಲಿ ಹೇಮಂತದ ನೆನಪಾಗಿ ಅವನ ನೈ ನಡುಗಿತ್ತು. ಉಂಗುರ ಸಂಕೋಲೆಯಾಗಿ ಮಾರ್ಪಟ್ಟಿರಲಿಲ್ಲವಾದ್ದರಿಂದ ಮನಸ್ಸಿಗೆ ಹಗುರವೆನಿಸಿತ್ತು. ವಿಚಾರ ಲೋಕದಿಂದ ಭೂಮಿಗಿಳಿದವನು ಸುತ್ತಲೂ ಕಣ್ಣು ಹೊರಳಿಸಿದ್ದ. ಕತ್ತಲೆ ಬೆಳೆಯುತ್ತ ಬಂದದ್ದರಿಂದ ಪಾರ್ಕಿನಲ್ಲಿ ಬಹಳ ಜನರಿರಲಿಲ್ಲ, ಚೆಂಡಾಟ ಆಡುತ್ತಿದ್ದ ಹುಡುಗರು ಮನೆಗೆ ಹೋಗಿ ಬಹಳ ಕಾಲವಾಗಿತ್ತು. ಹೂಸುತ್ತಿದ್ದ ಕಾರಂಜಿಯ ಬಳಿ, ಹುಲ್ಲಿನ ಮೇಲೆ ಕುಳಿತು ಸರಸಸಲ್ಲಾಪ ನಡೆಸುತ್ತಿದ್ದ ನವದಂಪತಿಗಳು ಸಲ್ಲಾಪವನ್ನು ಮನೆಯಲ್ಲಿ ಮುಂದುವರೆಸೋಣ ಎಂದು ತೀರ್ಮಾನಿಸಿ ಮೇಲೇಳುತ್ತಿದ್ದರು. ಅವನು ಬರುವ ಹೊತ್ತಿಗಾಗಲೆ ಬಂದು ಬೆಂಚಿನ ಮೇಲೆ ಕುಳಿತಿದ್ದ ಮುದುಕರು ಮಾತ್ರ ಇನ್ನೂ ಕುಳಿತಿದ್ದರು.

ಇಬ್ಬರು ಮುದುಕರು: ಧೋತ್ರ, ಶರ್ಟ್, ಕನ್ನಡಕ, ಒಳಗೆ ಎಳೆದ ಬಾಯಿ; ಬೋಳುತಲೆ, ಹಿಂದಲೆಯಲ್ಲಿ ಅರ್ಧ ಚಂದ್ರಾಕಾರದ ಒಂದು ಸಾಲು ಬಿಳಿಕೂದಲು. ಬೆಂಚಿನ ಪಕ್ಕದಲ್ಲಿ, ಅರೆ ಒಣಗಿದ ಹುಲ್ಲಿನ ಮೇಲೆ ಹಳೆಯ ಚಪ್ಪಲಿಗಳು, ಮಲಗಿದ ಮುದಿ ಊರುಗೋಲು.

"ನನಗೇಕೆ ಈ ಪಾಡು? ಮರಿಯಾಳಿಗೇಕೆ ಈ ಪಾಡು?"

ಚಿತ್ರದಿಂದ ಚಿತ್ರಕ್ಕೆ ಹರಿದ ಮನಸ್ಸು ಮತ್ತೆ ಪಾರ್ಕಿಗೆ ಬರುವ ಹೊತ್ತಿಗೆ ಪಾರ್ಕು ಖಾಲಿಯಾಗಿತ್ತು. ಹೊಟ್ಟೆ ಅಡಿಗೆಮನೆಯ ಧ್ಯಾನ ಮಾಡುತ್ತಿತ್ತು. ಮನೆಗೆ ಹೋಗಲು ಎದ್ದು ನಿಂತ. ಪಾದದ ಬಳಿ ಪೂಜೆಗಾಗಿ ಸುರಿದ ಹೂಗಳಂತೆ ರಾಶಿ ಶಿಗರೇಟು ತುಣಕುಗಳು ಬಿದ್ದಿದ್ದವು. ಸತ್ತ ಬಿಳಿ ಪತಂಗಗಳಂತೆ ಕಾಣುತ್ತಿದ್ದ ಅವುಗಳನ್ನು ಬದಿಗೆ ಸರಿಸಿ ಮುಂದೆ ನಡೆದಿದ್ದ.

* * *

ನೆಮ್ಮದಿಯನ್ನು ಮರಳಿ ಪಡೆದ ಮನಸ್ಸು ರಾತ್ರಿಯ ತಂಪನ್ನು ಗುರುತಿಸಿತು. ಮನೆಗೆ ನಡೆದೇ ಹೋಗಲು ನಿರ್ಧರಿಸಿದ.

ರಸ್ತೆ ರಸ್ತೆಯನ್ನು ಬೀಳ್ಕೊಟ್ಟಿತು. ದಾರಿಯಲ್ಲಿ ಜನ ಸಂಚಾರ ಕಡಿಮೆಯಾದಂತೆ ಕತ್ತಲೆ ಹೆಚ್ಚಾಗುತ್ತಿತ್ತು....ವೇಗವಾಗಿ ಹೆಜ್ಜೆ ಹಾಕುತ್ತಿದ್ದ ಕಾಲುಗಳು ಒಂದು ಕಟ್ಟಡದ ಮುಂದೆ ಕ್ಷಣಕಾಲ ನಿಂತವು. ಕಣ್ಣುಗಳು ಮಹಡಿಯನ್ನೇರಿದವು. ಒಂದು ಕೋಣೆಯನ್ನು ಹುಡುಕಿದವು.

ಕೆಲಸ ಮಾಡುತ್ತಿದ್ದ ಹುಡುಗಿಯರನೇಕರು ವಾಸಿಸುತ್ತಿದ್ದ ಕಟ್ಟಡ ಅದು. ಕೋಣೆಗಳ ಸಾಲು ಒಂದರ ಮೇಲೊಂದು: ರೈಲಿನ ಮೇಲೆ ರೈಲು, ಬೆಳಕನ್ನು ಹೊರಚೆಲ್ಲುತ್ತಿದ್ದ ಕಿಟಕಿಗಳು ಅಲ್ಲೊಂದು, ಇಲ್ಲೊಂದು; ಮೇಲೆಸೆದ ಮುಸುಕಿನ ರಂಧ್ರಗಳಿಂದ ಹೊರಚಿಮ್ಮುತ್ತಿದ್ದ ಬಿಳಿಯ ಜ್ವಾಲೆ, ಸುಪರಿಚಿತವಾದ ಕೋಣೆಯಲ್ಲಿ ದೀಪವಿತ್ತು.

"ಏನು ಮಾಡುತ್ತಿರಬಹುದು ಮರಿಯಾ? ಏನನ್ನಾದರೂ ಓದುತ್ತಿರಬಹುದೆ? ಅಥವಾ?....ಹೌದು. ಚಿಂತಾಮಗ್ನಳಾಗಿರಬೇಕು. ಮೂರು ವಾರಗಳಿಂದ ಅವಳನ್ನು ನೋಡಲು ಹೋಗಿಲ್ಲ. ಫೋನ್ ಕೂಡ ಮಾಡಿಲ್ಲ!"

ಹೊರಚಿಮ್ಮಲು ಹೋರಾಡುತ್ತಿದ್ದ ಕನಿಕರ, ಪ್ರೇಮಗಳನ್ನು

ಪ್ರಯಾಸದಿಂದ ಒತ್ತಿ ಮುಂದೆ ಸಾಗಿದ. ನಿಧಾನ ಮಾಡಿದರೆ ಕಾಲು ಗಳು ನಿರ್ಣಯಕ್ಕೆ ವಿರುದ್ಧವಾಗಿ ಹಿಂತಿರುಗುವವು ಎಂಬ ಸಂಶಯ ದಿಂದ ಮೊದಲಿಗಿಂತ ವೇಗವಾಗಿ ನಡೆಯತೊಡಗಿದ.

ಬಹುಕಾಲ ದೃಷ್ಟಿಸಿದ್ದರಿಂದ ದೀಪದ ಪ್ರತಿಬಿಂಬ ಇನ್ನೂ ಕಣ್ಣನ್ನು ಬೀಳ್ಕೊಟ್ಟಿರಲಿಲ್ಲ.

ಕತ್ತಲೆಯ ದಪ್ಪ, ಮೃದು ಪದರಗಳಲ್ಲಿ ದೃಷ್ಟಿಯನ್ನು ಹುದುಗಿಸಿ ಮುಂದೆ ನಡೆದ. ರಾತ್ರಿಯ ತಂಪನ್ನು ಬಾಚಿ, ಬಾಚಿ ತನ್ನಲ್ಲಿ ಅಡಗಿ ಸಿಡಲು ಪ್ರಯತ್ನಿಸುತ್ತ ಸಾಗಿದ.

ರಸ್ತೆಯ ವಂಕಿಯನ್ನು ಸಮೀಪಿಸಿದಾಗ ಕೇಳಿಬಂತು ಘಂಟಾ ನಾದ. ತಂಪಿನಲ್ಲಿ ತೇಲಿಬಿಟ್ಟ ಮನಸ್ಸು ಹಿಂತಿರುಗಿತು. ಅಗ್ನಿಶ ಮನ ಯಂತ್ರವೇನೋ ಎಂದು ಕೊಂಡ. ಆದರೆ ಗಂಟೆಯ ಧ್ವನಿ ಯಂತ್ರದ ಗಂಟೆಯ ಧ್ವನಿಯಂತಿರಲಿಲ್ಲ. ಅಷ್ಟು ತ್ವರೆ, ಏರು, ಅನಾಸಕ್ತಿ ಇರಲಿಲ್ಲ. ಆಳವಾದ, ನಿಧಾನವಾದ, ಸ್ನೇಹಮಯ ಧ್ವನಿ ಯಾಗಿತ್ತು. ಅಂಜಿಯುವನ ಕರೆಗೂ, ಗೆಳೆಯನ ಕರೆಗೂ ಇರುವಷ್ಟು ವ್ಯತ್ಯಾಸವಿತ್ತು. ವಂಕಿಯನ್ನು ದಾಟಿದಾಗ ತಿಳಿಯಿತು ಗಂಟೆಯ ಮೂಲ.

ಎರಡು ಕತ್ತಲು ದಾರಿಗಳಿಗೆ ಬೆಸಗೆ ಹಾಕಿತ್ತು ಬೆಳಕು ತುಂಬಿದ ಚರ್ಚ. ಬೊಂಬಾಯಿನಲ್ಲೆಲ್ಲ ಅದು ಪುರಾತನ, ಅತಿ ಸುಂದರ, ಅತಿ ಪ್ರಖ್ಯಾತವಾದುದು. ಅದರ ಎರಡು ದೊಡ್ಡ ಗಂಟೆಗಳು ಆಹ್ವಾನ, ಬಿನ್ನಹಗಳನ್ನು ಬಿತ್ತರಿಸುತ್ತಿದ್ದವು. ಚರ್ಚಿನ ಮುಂದೆ ಸ್ಥಾಪಿತವಾಗಿತ್ತು ಕಾರುಗಳ ಸಾಲು. ಅವುಗಳ ಮಧ್ಯದಲ್ಲ ತೂರಿ ಚರ್ಚನ್ನು ಪ್ರವೇಶಿಸುತ್ತಿತ್ತು ಜನರ ಸಾಲು.

ಇದ್ದಕ್ಕಿದ್ದಂತೆ ಘಂಟಾನಾದ ನಿಂತಿತು. ಅವರ ಪ್ರತಿಧ್ವನಿ ಯಂತಿದ್ದ ಬೇರೊಂದು ನಾದ ಚರ್ಚಿನ ಬಾಗಿಲುಗಳಿಂದ ಹೊರಹರಿ ಯಿತು. ಗಂಟೆಯ ನುಡಿಗಳ ನಡುವೆ ಅಲ್ಪವಿರಾಮವಿರುತ್ತಿತ್ತು;

ಹೊಸದಾಗಿ ಕೇಳಿಬಂದ ನಾದ ತಡೆಯಿಲ್ಲದೆ ಹರಿಯುವ ಹೊಳೆ. ಗಂಟೆಯು ಮಿಡಿತ ಚರ್ಚಿನ ಗೋಪುರದಿಂದ ವೃತ್ತಾಕಾರವಾಗಿ ಕೆಳ ಗಿಳಿಯುತ್ತಿತ್ತು; ಹೊಸ ಧ್ವನಿ ವಟ್ಟಧೂಮದ ರೂಪದಲ್ಲಿ ಆಕಾಶದೆಡೆ ಸಾಗುತ್ತಿತ್ತು....ಚರ್ಚಿನಿಂದ ಹೊರಹೊಮಿತ್ತು ಆರ್ಗನ್ ವಾದ್ಯದ ಹೊನ್ನು ನಾದ.

ಆಗ ಅವನಿಗೆ ನೆನಪಾಯಿತು: ಈಸ್ಟರ್ ಹಬ್ಬಕ್ಕಾಗಿ ನಡುರಾತ್ರಿ ಆರಾಧನೆ!

ವಾದ್ಯದ ಧ್ವನಿಯಲ್ಲಿನ ಗಾಂಭೀರ್ಯ, ಮಾರ್ದವ ಏನೇನೋ ನೆನಪುಗಳನ್ನು ಕರೆದು ಮನಸ್ಸನ್ನು ಚುಚ್ಚಿತು. ನೆನಪು ಬಳ್ಳಿ ಬಲಗೊಂಡು ನೇಣಾಗಿ ಪರಿಣಮಿಸುವ ಮೊದಲೇ ಅಲ್ಲಿಂದ ಕಾಲ್ತೆಗೆಯ ಬೇಕೆಂದು ಮುನ್ನಡೆಯುವುದರಲ್ಲಿದ್ದ. ನಾದದ ಹೊನ್ನು ಹೊಳೆ ಅಡ್ಡ ಬಂತು. ಅದರಲ್ಲಿನ ಗಾಂಭೀರ್ಯ, ಮಾರ್ದವಗಳು ಅವನನ್ನು ಹಿಂದೆಳೆದವು.

ಮೆಟ್ಟಲನ್ನು ಹತ್ತಿ, ಪವಿತ್ರ ಜಲವನ್ನು ಸ್ವೀಕರಿಸಿ ಒಳಗೆ ಹೋದ. ಕತ್ತಲೆಯನ್ನು ತುಂಬಿಕೊಂಡಿದ್ದ ಕಣ್ಣುಗಳು ದೀಪದ ಬೆಳಕು, ವಾದ್ಯದ ಧ್ವನಿಯ ಬೆಳಕು ಇವುಗಳ ಜೋಡಿ ಪ್ರಕಾಶವನ್ನು ಕಂಡು ಬೆಚ್ಚಿದವು. ಒಂದು ಬಾಗಿಲಿನ ಬದಿಗೆ, ಬೆಳಕು ಹೆಚ್ಚಿಲ್ಲದ, ಜನ ಹೆಚ್ಚಿಲ್ಲದ ಮೂಲೆಯೊಂದರಲ್ಲಿ ಕುಳಿತ.

ಅವನು ಚರ್ಚನ್ನು ಪ್ರವೇಶಿಸಿ ವರ್ಷಗಳಾಗಿದ್ದವು. ತಂಗಿಯ ಮದುವೆಯ ದಿನ ತಾಯಿ, ತಂದೆಯರೊಡನೆ ಹೋಗಿದ್ದ. ವಿವಾಹ ಜರುಗಿದುದು ಒಂದು ಸಣ್ಣ, ಬಡ ಚರ್ಚಿನಲ್ಲಿ, ಮತ್ತೆ ಚರ್ಚಿನ ಬಳಿ ಬಂದುದು ವಾರದ ಹಿಂದೆ. ಇದೇ ಚರ್ಚಿನಲ್ಲಿ ಭಾರಿ ಮದುವೆ ಯೊಂದು ಜರುಗಿತ್ತು. ಬೊಂಬಾಯಿನಲ್ಲಿ ನೆಲೆಸಿದ್ದ ಇಬ್ಬರು ಹಣ ವಂತ ಆಂಗ್ಲರ ಮನೆತನಗಳು ಮದುವೆಯಿಂದ ಒಂದಾಗಿದ್ದವು. ಅವನು ಸಮಾರಂಭಕ್ಕೆ ಪತ್ರಿಕಾ ಪ್ರತಿನಿಧಿಯಾಗಿ ಬಂದಿದ್ದ. ತಡವಾಗಿ

ಬಂದದ್ದರಿಂದ ಒಳಗೆ ಹೋಗಲಾಗಿರಲಿಲ್ಲ. ಹೊರಗೇ ನಿಂತು ಛಾಯಾ ಚಿತ್ರಗಳನ್ನು ತೆಗೆದಿದ್ದ. ಸಮಾರಂಭದ ವಿಜೃಂಭಣೆ, ಮನೆಯವರ ಉಲ್ಲಾಸ, ಪ್ರೇಕ್ಷಕರ ಬೆರಗು ಇವುಗಳನ್ನು ಕಂಡು ತಿರಸ್ಕಾರದ ನಗೆ ನಕ್ಕಿದ್ದ.

ಅವನು ಕುಳಿತ ಕೂಡಲೆ ಮೇಳ-ಗೀತ ಪ್ರಾರಂಭವಾಯಿತು. ಗಾಯಕ ವೃಂದ ಪವಿತ್ರ ಗೀತಗಳ ಪಠನವನ್ನು 'ರೆಕ್ವಿಎಂ' ಇಂದ ಆರಂಭಿಸಿತು. ಕ್ರಿಸ್ತನ ಕಡೆ ಉಸಿರಿನ ಹಿಂದೆಯೇ ಧಾವಿಸಿ ಬಂದ ಕತ್ತಲೆಯ ವಿಷಯವಾಗಿ ವೃಂದ ಹಾಡಿತು. ಶಿಕ್ಷಿಸಿದವರ ಅಜ್ಞಾನದ ಬಗೆಗೆ ಕ್ರಿಸ್ತನ ಮರುಕದ ಮಾತುಗಳು, ಅವುಗಳನ್ನು ಕೇಳಿ ಅವಮಾನಿತರಾದ ಕ್ರೂರಿಗಳು, ಶಿಲುಬೆಯನ್ನು ಸುತ್ತುಗಟ್ಟಿದ ಕ್ರಿಸ್ತನ ಹಿಂಬಾಲಕರ ಶೋಕಗೀತೆ-ಎಲ್ಲವನ್ನೂ ಕುರಿತು ಹಾಡಿತು.

ಹಿಂಬದಿಯಲ್ಲಿ ಹುಡುಗಿಯರ, ಸಣ್ಣ ಹುಡುಗರ ಏರು ಧ್ವನಿಗಳು, ಮುಂದೆ ದೊಡ್ಡ ಗಂಡಸರ ಆಳವಾದ ಧ್ವನಿಗಳು; ಏರು ಧ್ವನಿಯ ಪಿಟೀಲು, ಆಳ ಧ್ವನಿಯ ಆರ್ಗನ್. 'ಅಲೆಗಳು'-ಆ ಜಪಾನೀ ಜಲವರ್ಣದ ಚಿತ್ರದ ನೆನಪಾಯಿತು ಅವನಿಗೆ. ಹಿನ್ನೆಲೆಯಲ್ಲಿ ಮುಗಿಲೆತ್ತರದ ತೆಳು, ಚಂಚಲ ಅಲೆಗಳು; ಮುಂದೆ ಗಂಭೀರವಾದ, ತಗ್ಗಾದ, ದಪ್ಪ ಅಲೆಗಳು.

'ರೆಕ್ವಿಎಂ', 'ಗ್ಲೋರಿಯಾ' ಕ್ಕೆ ಎಡೆಮಾಡಿಕೊಟ್ಟಿತು. ಏರು ಧ್ವನಿಗಳ ಕಣ್ಣೀರನ್ನು ಒರಸುತ್ತ ಬಂತು ಒಂದು ಗಂಡು ಧ್ವನಿ, ಹಿನ್ನೆಲೆಯಿಂದ. ಸಮಾಧಿ ಒಡೆದು ಮೇಲೆದ್ದ ಕ್ರಿಸ್ತ ಭಕ್ತ ವೃಂದವನ್ನು ಸಂತೈಸಿ, ಹಾರೈಸಿ ಸ್ವರ್ಗದತ್ತ ಸಾಗಿದ. ಮಿಂಚು ಆರತಿ ಬೆಳಗಿತು. ಮಳೆ ಮಂಗಲ ಗಾನ ಹಾಡಿತು. ಗುಡುಗು ಜಯಭೇರಿ ಬಾರಿಸಿತು. ಭಕ್ತರ ಶೋಕ ಆನಂದೋತ್ಸಾಹಗಳಿಗೆ ತಿರುಗಿತು. ಪುನರ್ಜನ್ಮ ಪಡೆದ ಜೀವಗಳೆಲ್ಲವೂ ಕೃತಜ್ಞತೆಯ ನರ್ತನದಲ್ಲಿ ಭಾಗವಹಿಸಿದವು.

ಶಿಲಾಪೀಠ ಒಂದರ ಪಾದದ ಬಳಿ ನಿಂತಿದ್ದ ಯುವತಿಯೊಬ್ಬಳು

ಪೀಠದತ್ತ ನಡೆದಳು. ಪೀಠಕ್ಕೆ ಕರೆದೊಯ್ಯುವ ದಾರಿ ಬಳಸು: ಶಿಲೆಯ ಸುತ್ತ, ಸುತ್ತ, ಕೊರೆದ ಮೆಟ್ಟಿಲುಗಳು. ನಿಧಾನವಾಗಿ ಹತ್ತ ತೊಡಗಿದಳು ಶ್ವೇತವಸ್ತ್ರಧಾರಿಣಿ; ಶಿಲೆಯ ಸುತ್ತ, ಸುತ್ತ ಮೃದು ಬಿಳಿ ಬೆಳಕು ಸರಿಯತೊಡಗಿತು. ನರ್ತನದ ಸಂಗೀತ ಮರೆಯಾಯಿತು. ಕೈಮುಗಿದು ನಡೆಯತೊಡಗಿದ್ದ ಬಾಲೆ ಹಾಡತೊಡಗಿದಳು: 'ಆವೇ ಮರೀಯಾ.... ಆವೇ ಮರಿಯಾ....'

ವರ್ತುಲ ವರ್ತುಲವಾಗಿ ಹರಿದು ಬಂದ ಗಾನದೆಳೆ ನೇರವಾಗಿ ಅವನನ್ನು ಸೇರಿತು. ಮೇಳದ ಸಂತಸದಲ್ಲಿ ಮೈಮರೆತಿದ್ದವನನ್ನು ಕಂಠದ ತೀಕ್ಷ್ಣತೆ ಎಚ್ಚರಿಸಿತು. ನರ್ತಿಸುತ್ತಿದ್ದ ಜನ, ಸುತ್ತುವರಿಯುತ್ತಿದ್ದ ತರುಣಿ ಎಲ್ಲರೂ ಮರೆಯಾದರು....'ಆವೇ ಮರೀಯಾ' ಮುಂದುವರಿಯುತ್ತಿತ್ತು. ಗಾಯಕಿ ಪಟ್ಟಣದಲ್ಲಿ ಪ್ರಸಿದ್ಧಳಾಗಿದ್ದ, ಮನ್ನಣೆಗೆ ಪಾತ್ರಳಾಗಿದ್ದ ಸೊಪ್ರಾನೊ....ಮತ್ತದೇ ಹೆಸರು, ಮತ್ತದೇ ಮಾರ್ದವ! ಗಾಯಕಿಯ ಧ್ವನಿಯನ್ನು ಹಿಂದೂಡಿ ಬಂತು ಕರೆ: 'ಟೋನಿ....ಟೋನಿ!' ಅಲೆಗಳು ತೊಳೆದಿದ್ದ ಎದೆ ಹಲಗೆಯಮೇಲೆ ಕರೆ ಕೊರೆಯಿತು.

'ಟೋನಿ....ಟೋನಿ!' ಆ ಸಾಲಿನ ಕೆಳಗೆ ಅವನಿಗರಿವಿಲ್ಲದಂತೆಯೇ ಬಯಕೆ ಬರೆಯಿತು: 'ಮರಿಯಾ—ಮರಿಯಾ!'—ನರ್ತಕರು ಜೊತೆ ಗಾತಿಯರತ್ತ ಸರಿಯುತ್ತ ಉಸುರಿದರು: 'ಒಲವು ಸೊಗಸು! ' ತೇಜ ಪಂಕದ ಮೇಲೇರುತ್ತಿದ್ದ ಕ್ರಿಸ್ತನ ಶಾಂತ-ನಗೆ ನುಡಿಯಿತು: 'ಜೀವನ ಸೊಗಸು!'

ಮೂರು ವಾರಗಳಿಂದ ಅಶಾಂತಿಗೆ ಕಾರಣವಾಗಿದ್ದ ಚಿಂತೆ: ಅದಕ್ಕೆ ಹೊಳೆದ ಪರಿಹಾರ, ಎಲ್ಲ ಅನವಶ್ಯಕ, ತಪ್ಪು ಎನಿಸಿತು ಅವನಿಗೆ. ಮೆಲ್ಬಾ ಮನೆಬಿಡುವ ಮುನ್ನ ಹಾಡಿ ನೆರೆ ಹೊರೆಯವರ ಮನತಣಿಸಿದ ಹಾಡು, ಮೆನ್ಯೂಹಿನ್ ಪಿಟೀಲು ತಂತಿಗಳಿಂದ ಹೊರ ಹೊಮ್ಮಿಸಿ ಜನರ ಮನ ಸೆಳೆದ ಹಾಡು ಅವನ ನಿರ್ಧಾರವನ್ನು ಕ್ಷಣ

ಕಾಲದಲ್ಲಿ ಹೇಳ ಹೆಸರಿಲ್ಲದಂತೆ ಮಾಡಿತು.

ಯುವತಿ ಪೀಠದ ಬಳಿ ಸೇರಿದಳು. ಪೀಠದ ಮೇಲಿನ ಶಿಲು ಬೆಗೆ ಮಣಿದು ಜನರತ್ತ ತಿರುಗಿದಳು. ತನ್ನ ಎರಡು ಕೈಗಳನ್ನೂ ಅವರೆಡೆಗೆ ಹಾರೈಕೆಯಲ್ಲಿ ಚಾಚಿದಳು. ಸ್ಫೂರ್ತಿಗೊಂಡ ಜನ ಮತ್ತೆ ಹಾಡಲು ಪ್ರಾರಂಭಿಸಿದರು: 'ಕೋರ್ ಆಮೋರಿ !' ಸಾಮಾನ್ಯ ಆನಂದಕೂಟಗಳ ಮೇಳಗಳಲ್ಲಿರುವ ಬಿರುಸು ಅದರಲ್ಲರಲಿಲ್ಲ. ಧ್ವನಿ ಗಳಲ್ಲಿನ ಮಾಧುರ್ಯ, ಸೂಕ್ಷ್ಮತೆ .ಶ್ರಾವಕರ ಮೇಲೆ ಮೊಲ್ಲೆದಳ ಸುರಿಯುತ್ತಿದ್ದವು. ಹೂದಳದ ಸ್ಪರ್ಶಕ್ಕೆ ಮೃದುವಾಯಿತು ಅವನ ಮೈ, ಮನಸ್ಸು.

ಮೇಳದವರು ಕಡೆಯದಾಗಿ 'ಕ್ರೀಡೊ'ವನ್ನು ಹಾಡಲಾರಂಭಿ ಸಿದರು. ಮೊಲ್ಲೆದಳ ಮೃದು ಮಾಡಿದ ಮೈ, ಮನಗಳನ್ನು ಸವರಿತು ನವಿಲುಗರಿ ಬೀಸಣಿಗೆ ಗಾಳಿ; ದೇವತೆಗಳ ರೆಕ್ಕೆ ಸ್ಪರ್ಶ. ಮೇಳ ಕಡೆಯ ಸಾಲನ್ನು ಒಂದು ಕಂಠದಿಂದ ಹಾಡಿತು: 'ಆಮೆನ್..ಆಮೆನ್!' ತಗ್ಗು ದನಿಯಲ್ಲಿ ತೇಲಿ ಬಂತು ವಿಶ್ವಾಸ ತುಂಬಿದ ಆಶೀರ್ವಾದ; ತಲೆ ತಡವಿತು ಕೈ. ಇನಿಯಳ ಬೆಂಕಿ ಸ್ಪರ್ಶವಲ್ಲ; ಶಾಂತಿ ಲೇಪಿಸಿದ, ಶಾಂತಿ ಲೇಪಿಸುವ ವೃದ್ಧ ಕೈ-ತಾಯಿಯದು, ತಂದೆಯದು, ಅಜ್ಜಿ ಯದು, ಅಜ್ಜನದು. ಬಯಕೆ ಬಸಿಯುವ ಕೈಯಲ್ಲ; ಸಮಾಧಾನ ತುಂಬುವ, ಬಯಕೆಗಳೇನೂ ಇಲ್ಲದ ಕೈ; ಒಂದೇ ಬಯಕೆ: ಹಾರೈಕೆ. ಪವಿತ್ರಾತ್ಮ ಸಂತನ ಸ್ಪರ್ಶ, ದೋಷಾತೀತ ಪೋಪನ ಸ್ಪರ್ಶ... ಮೃದು ಮೈ, ಈಗ ತಂಪಾಗಿತ್ತು.

ಗಾನ ಮಂತ್ರದಲ್ಲಿ ಕೊನೆಗಂಡಿತು. ನಾಟಕಗಳಲ್ಲಿನಂತೆ, ಸಂಗೀತ ರಚನೆಗಳಲ್ಲಿನಂತೆ, ಆಪೆರಾಗಳಲ್ಲಿನಂತೆ ಪರಾಕಾಷ್ಠೆಗೇರಲಿಲ್ಲ. ಉದ್ದೇಶ ಪೂರ್ವಕವಾಗಿಯೇ ಆ ರೀತಿ ಅಂತ್ಯವಾಗಿತ್ತು. ಪರಾಕಾಷ್ಠೆ ಗೇರಿದ ಪಾದದ ಮರುಹೆಜ್ಜೆ ಕೆಳಗಿಳಿತ, ಹಠಾತ್ತಾದ, ಕ್ಷಿಪ್ರವಾದ ಅಧಃಪತನವಾಗಿರಬಹುದು ಅಥವಾ ನಿಧಾನದ, ಅನುಕ್ರಮವಾದ

ಕೆಳಗಿಳಿಯುವಿಕೆ ಇರಬಹುದು. ಯೌವನದೊಲವು!....ಆದರೆ ಈ ಶಾಂತ, ದೀರ್ಘಪ್ರೇಮದಲ್ಲಿ ಬಿರುಕಿಲ್ಲ, ತಡೆಯಿಲ್ಲ. ಮಧ್ಯವಯಸ್ಸಿನ ಪ್ರೇಮ!....ಥಿಸಿಯಸ್, ಹಿಪ್ಪೊಲೈಟಾರ ನಿಶ್ಚಿತ ಪ್ರೇಮ ಮತ್ತು ಮಿಕ್ಕ ಮೂರು ಜೋಡಿಗಳ ಚಂಚಲ ಪ್ರೇಮ ...ಸಾತ್ವಿಕ ಪ್ರೇಮ, ರಾಜಸಿಕ ಪ್ರೇಮ....ಅಸ್ಥಿರತೆ ಇಲ್ಲ, ಸಂದೇಹ ಸಂಶಯಗಳಿಲ್ಲ. ನಿಸ್ಸಂದೇಹ ವಾದ ನಂಬಿಕೆ ಇದೆ, ಶ್ರದ್ಧೆ ಇದೆ, ಶಾಂತಿ ಇದೆ.

ಇದರ ಅರಿವಾದವನು ಅಂದುಕೊಂಡ: "ದುಃಖಕ್ಕೆ, ಕಷ್ಟಕ್ಕೆ, ಪ್ರೇಮದ ಸಾವಿಗೆ ಕಾರಣ ಕಾಲ ಎಂದುಕೊಂಡಿದ್ದೆನಲ್ಲ. ಎಂತಹ ಮೂರ್ಖ ನಾನು!"

ಮೇಳದವರು ತಮ್ಮ ಸ್ಥಳಗಳಲ್ಲಿ ಕುಳಿತೊಡನೆಯೆ, ಯಾರಿಗೂ ಅರಿವಾಗದಂತೆ, ಪಕ್ಕದಲ್ಲಿದ್ದ ಬಾಗಿಲಿನ ಮೂಲಕ ಆಚೆಗೆ ಬಂದ. ನಡೆದು ಬಂದ ಹಾದಿಯನ್ನೇ ಮತ್ತೆ ಹಿಡಿದ.

ದಾರಿ ವೇಗವಾಗಿ ಓಡಿತು. ಮರಿಯಾಳಿದ್ದ ಕಟ್ಟಡದ ಬಳಿ ನಿಂತಿತು. ಅವಳ ಕೋಣೆಯಲ್ಲಿನ್ನೂ ಬೆಳಕು ತುಂಬಿತ್ತು. ಮೆಟ್ಟಿಲಿನ ಬಳಿ ಅಡ್ಡವಾಗಿ ಬಂದ ಕಾವಲುಗಾರನ ಕೈಗೆ ನಾಣ್ಯವೊಂದನ್ನು ಅವುಕಿ ಮೇಲೋಡಿದ. ಕೋಣೆಯ ಬಾಗಿಲನ್ನು ಬಡಿದ.

"ಯಾರದು?"

ಧ್ವನಿಯಲ್ಲಿ ಮೂರು ವಾರದ ಆತಂಕ, ಆಕಾಂಕ್ಷೆಗಳು ತುಂಬಿ ದ್ದವು.

"ನಾನು, ಟೋನಿ....ಬಂದಿದ್ದೇನೆ. ಬಾಗಿಲು ತೆಗೆ!"

# ವೈಶಾಖ ಶುದ್ಧ ಪೂರ್ಣಿಮೆ

ಇಂದು ಮತ್ತೆ ವೈಶಾಖ ಶುದ್ಧ ಪೂರ್ಣಿಮೆ. ಜ್ಞಾನವಮಾನವನ ರೂಪತಾಳಿದ ದಿನ. ಚಂದ್ರ ಬೆಳಕಿನ ಜೊತೆಗೆ ಜೇನು ಚೆಲ್ಲುವ ದಿನ.

ಇಂದು ನನ್ನಲ್ಲಿ ಶಾಂತಿ ತುಂಬಿದೆ. ಸಕಲ ಸೃಷ್ಟಿಗೆ ಹಸಿರು ಹನಿಸಿದ ಚಂದ್ರ ನನ್ನೆದೆಗೂ ಹಸಿರು ಸುರಿದಿದ್ದಾನೆ. ಎದೆಯಲ್ಲಿ ಎಳೆ ಗರಿಕೆ ಹಾಸಿಗೆ.

ವರ್ಷದ ಹಿಂದಿನ ಪೂರ್ಣಿಮೆ! ಎದೆ ಬಿರುಕುಗಳ, ಬಿಕ್ಕುಗಳ ಚಾಪೆಯಾಗಿತ್ತು. ಬಳಿಸುಳಿದ ಚಂದ್ರನುಸಿರಿನ ಹಿಮ ಹತಾಶೆಯ ಬೇಗೆಗೆ ಸಿಕ್ಕಿ ಆವಿಯಾಗಿತ್ತು.

ಅದರ ಹಿಂದಿನದು! ಅಂದು ನನ್ನ ಹಾಡಿಗೆ ಹಿಮ್ಮೇಳ ಕೂಡಿಸಿದ್ದ ಚಂದ್ರ. ಕ್ಷಣಕಾಲ ಅಸೂಯೆಯಿಂದ ಮೋಡದ ಹಿಂದೆ ಅವಿತಿದ್ದರೂ ನಮ್ಮಿಬ್ಬರನ್ನು ನೋಡುವ ಕುತೂಹಲದಿಂದ ತೆರೆ ಹರಿದು ಹೊರ ಚಿಮ್ಮಿದ್ದ.

ಎರಡು ವರ್ಷಗಳ ಹಿಂದೆ....

*   *   *

ಎರಡು ವರ್ಷಗಳ ಹಿಂದೆ...

ಬೇಸಿಗೆಯ ರಜಕ್ಕೆ ಮನೆಗೆ ಧಾವಿಸಿದ ಅಣ್ಣ ಜೊತೆಯಲ್ಲಿ ತನ್ನ ಜೀವದ ಗೆಳೆಯ ಚಂದ್ರಶೇಖರನನ್ನು ಕರೆತಂದಿದ್ದ. ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದರಿಂದ ನೆಮ್ಮದಿ, ರಜೆ ಬಂದಿದ್ದರಿಂದ ಉಲ್ಲಾಸ ಇಬ್ಬರಲ್ಲೂ ತುಂಬಿತ್ತು. ಮೊದಮೊದಲು ಚಂದ್ರಶೇಖರನನ್ನು ಆವರಿಸಿದ್ದ ಸಂಕೋಚ ಗೆಳೆಯನ ವಿಶ್ವಾಸ, ಅವನ ಮನೆಯವರ ಸೌಹಾರ್ದ ಇವುಗಳಿಂದ ದೂರವಾಗಿತ್ತು.

ಅಣ್ಣನ ಜೀವದ ಗೆಳೆಯ ನನ್ನ ಜೀವದ ಗೆಳೆಯನೂ ಆಗಲು ಬಹಳ ಕಾಲ ಹಿಡಿಯಲಿಲ್ಲ. ಚಂದ್ರಶೇಖರ—ಚೆಲುವು ಹೆಸರಿಗೆ ತಕ್ಕ ರೂಪ, ರೂಪಕ್ಕೆ ತಕ್ಕ ಮನಸ್ಸು. ಕಣ್ಣು ಗುಡ್ಡೆಯೊಳಗೆ ಕೂಡಿಟ್ಟ ಬೆಳದಿಂಗಳು, ನಮ್ಮ ಜೊತೆಗೆ ಏನೇನೋ ವಿಷಯಗಳ ಬಗೆಗೆ ಚರ್ಚಿಸುತ್ತಿದ್ದಾಗ ಎಡೆ ಬಿಡದೆ ಆಡುತ್ತಿದ್ದ ಪ್ರತಿಭೆಯ ಮಿಂಚು, ಎಲ್ಲರೆಡೆಗೆ ತೋರುತ್ತಿದ್ದ ಸರಳ ಸ್ವಭಾವದ ಅಭಿವ್ಯಕ್ತಿ ಸಹಾನುಭೂತಿ....ಮನೆಗೆ ಬಂದ ವಾರದಲ್ಲಿ ಚಂದ್ರಶೇಖರ ನಮ್ಮೆಲ್ಲರ ಮನ ಸೆಳೆದಿದ್ದ. ಮಾತು—ನಮ್ಮ ತಂದೆಯ ಜೊತೆ ರಾಜಕೀಯ, ತಾಯಿಯ ಜೊತೆ ಪರಿಚಯಸ್ಥರ—ಮುಖ್ಯವಾಗಿ, ಅವಳಿಗೆ ಮುಖ್ಯವಾದ ನನ್ನ ಅಣ್ಣನ—ವಿಷಯ; ಅಣ್ಣನ ಜೊತೆ ಊರಿನಲ್ಲಿ ತಿರುಗಾಟ, ತಂಗಿಯ ಜೊತೆ ಕಲ್ಲಾಟ, ನನ್ನ ಜೊತೆ ಮಾತಿಗಿಂತ ಹೆಚ್ಚು ಮೌನ....

ಮನೆಯವರೆಲ್ಲರ ಮೆಚ್ಚಿಗೆಗೆ ಪಾತ್ರನಾದವನನ್ನು ಮನೆಗೆ ಸೇರಿಸುವ ವಿಚಾರ ತಾಯಿಗೆ ಹೊಳೆದುದು ಸಹಜ. ಮಗನಿಂದ ಚಂದ್ರಶೇಖರನ ವಿಷಯವನ್ನು ತಿಳಿದುಕೊಂಡರು.

ಚಂದ್ರಶೇಖರನ ತಂದೆತಾಯಿ ಅವನು ಚಿಕ್ಕವನಾಗಿದ್ದಾಗಲೇ ಸತ್ತು ಹೋಗಿದ್ದರು. ಬೆಳೆಸಿದ ಅಣ್ಣನಿಗೆ ಸಂಸಾರ ಬೆಳೆದಂತೆ ಇವನಲ್ಲಿ ಅನಾಸಕ್ತಿಯೂ ಬೆಳೆಯುತ್ತ ಬಂತು. ಚಂದ್ರಶೇಖರನ ಪಾಲಿಗೆ ಅವನ ಗೆಳೆಯರೇ ಮನೆಯವರಾದರು.

ಈ ವೃತ್ತಾಂತವನ್ನು ಕೇಳಿದ ಮೇಲೆ ಅವನ ಬಗೆಗಿದ್ದ ನನ್ನ ಮೆಚ್ಚಿಕೆಗೆ ಸಹಾನುಭೂತಿ ಬಂದು ಕೂಡಿತು. ಎರಡು ಬಳ್ಳಿಗಳ ಮಿಲನದಿಂದ ನೂರು ಕುಡಿಗಳು ಚಿಮ್ಮಿದವು. ಬಳ್ಳಿಸಾಲು ನಾಚಿಕೆ, ಸಂಕೋಚಗಳನ್ನು ಮರೆಮಾಡಿತು. ಇಬ್ಬರ ನಡುವೆ ಹೆಪ್ಪುಗಟ್ಟಿ ನಿಂತಿದ್ದ ಮೌನವನ್ನು ಮರುಕ, ಮಾರ್ದವ ಕರಗಿಸಿದವು.

"ಹುಡುಗ ಒಳ್ಳೆಯವನು. ಲಕ್ಷಣವಾಗಿದ್ದಾನೆ, ಓದಿದ್ದಾನೆ,

ನಮ್ಮ ಜೊತೆ ಹೊಂದಿಕೊಂಡು ಹೋಗ್ತಾನೆ; ಎಲ್ಲಾ ಸರಿ, ಆದರೆ ಹಿಂದಿನ ಆಸ್ತಿ, ಗೀಸ್ತಿ ಏನೂ ಇಲ್ಲವಲ್ಲಾಂದ್ರೆ?" ತಾಯಿಯ ಆತಂಕದ ಅಡ್ಡಿ ಹೆಂಗಸಿಗೆ ಸಹಜವಾದ ಪ್ರಾಪಂಚಿಕ ದೃಷ್ಟಿಗೆ ಕಂಡು ಬಂದ ಅಡ್ಡಿ.

"ಹಿಂದಿನ ಆಸ್ತಿ ಇಲ್ಲದೆ ಇದ್ದರೆ ಏನು? ಅವನ ವಿದ್ಯೆಯೇ ಅವನಿಗೆ ಆಸ್ತಿ. ಅವನ ಬುದ್ಧಿಗಿಂತ ಹೆಚ್ಚು ಆಸ್ತಿ ಬೇಕೇ, ಹೇಳು? ಪರೀಕ್ಷೇಲಿ ಚೆನ್ನಾಗಿ ಪ್ಯಾಸ್ ಮಾಡ್ತಾನೆ. ಒಳ್ಳೇ ಕೆಲಸ ಸಿಕ್ಕತ್ತೆ, ಚೆನ್ನಾಗಿರ್ತಾನೆ. ಇನ್ನೇನು?" ತಂದೆಯ ನೆಮ್ಮದಿಯ ಉತ್ತರ. ಗಂಡಸಿಗೆ ಸಹಜವಾದ ಆದರ್ಶ ನುಡಿಸಿದ ಉತ್ತರ.

"ಅವನಿಗೆ ಆಸ್ತಿ ಇಲ್ಲ ಅಂತ ವಿಜಯನ್ನ ಅವನಿಗೆ ಕೇಳದೆ ಇದ್ದರೆ, ಅದು ಪೆದ್ದುತನ," ಎಂದ ಅಣ್ಣ ತಾಯಿಗೆ, ಬಳಕೆಯ ಧೈರ್ಯದಿಂದ, ಅಭಿಮಾನದ ಕಠೋರತೆಯಿಂದ.

ಮೆಚ್ಚಿನ ಮಗನ ಹಠದ ಕಾವು ತಾಯಿಯ ಅಡ್ಡಿಯನ್ನು ಬತ್ತಿಸಿತು.

ಬಾಗಿಲಿನ ಮರೆಯಲ್ಲಿ ತವಕದಿಂದ ಕಾದಿದ್ದ ನನ್ನ ಹೃದಯಕ್ಕೆ ಅಣ್ಣನ ಕಠೋರತೆ ಅಮೃತಸಮಾನವಾಗಿತ್ತು.

ಸೂಕ್ಷ್ಮಪ್ರಶ್ನೆಯಿಂದ ಅಣ್ಣ ಗೆಳೆಯನ ಅಭಿಪ್ರಾಯವನ್ನು ತಿಳಿದ. ತಂದೆ, ತಾಯಿ, ನೇರವಾಗಿ ಕೇಳಿದರು; ವಂದನೆಯನ್ನರ್ಪಿಸಿದರು. ಅಂದು ರಾತ್ರಿ ಊಟಕ್ಕೆ ಸೇರಿದಾಗ ಚಂದ್ರಶೇಖರನ ಕಣ್ಣುಗಳು, ಮಿಕ್ಕವರ ಕಣ್ಣು ತಪ್ಪಿಸಿ, ನನ್ನನ್ನು ಅರಸಿದವು. ಆವನ ದೃಷ್ಟಿ ಒಪ್ಪಿಗೆಯನ್ನು ಸೂಚಿಸಿತು, ಒಲವನ್ನು ಯಾಚಿಸಿತು.

"ಯಾಚನೆಯ ಅವಶ್ಯಕತೆಯಲ್ಲಿ?" ಎಂದು ಉತ್ತರವಿತ್ತಿತು ಮಾರ್ದವತೆಯಲ್ಲಿ ಮಿಂದ ನನ್ನ ದೃಷ್ಟಿ.

* * *

ಅಂದಿನಿಂದ ಗೆಳೆಯರಿಬ್ಬರ ಜೊತೆ ನನಗೊಂದು ಸ್ಥಾನ ಸಿದ್ಧ

ವಾಯಿತು. ಅಣ್ಣನ ಸಂತಸದ, ಸ್ನೇಹ ಪೂರ್ಣ ಹಾಸ್ಯ, ತಂದೆ ತಾಯಿಯರ ಆನಂದ, ನೆಮ್ಮದಿ ತುಂಬಿದ ಮಾತು ಬಳ್ಳಿ ಸಾಲಿಗೆ ಮೃದು ಬಿಸಿಲನ್ನೆರೆದವು. ಬಳ್ಳಿಗೆ ಭಾರವಾದ ಮೊಗ್ಗಿನ ತೋರಣ ನಕ್ಕು ಹೂಮಾಲೆಯಾಯಿತು.

ಸಂಪ್ರದಾಯಕ್ಕನುಗುಣವಾಗಿ ತಂದೆ ಚಂದ್ರಶೇಖರನ ಅಣ್ಣನಿಗೆ ಬರೆದರು. "ಅವನು ಒಪ್ಪಿದ ಮೇಲೆ ನನ್ನದೇನಿದೆ?" ಎಂದು ಬಂತು ಬಿಗುವಿನ ಉತ್ತರ.

ಪರೀಕ್ಷೆಯ ಫಲಿತಾಂಶ ಬಂತು. ನಿರೀಕ್ಷಿಸಿದ್ದಂತೆ ಇಬ್ಬರಿಗೂ ತೇರ್ಗಡೆಯಾಗಿತ್ತು. ಅವರು ತೇರ್ಗಡೆಯಾಗಿದ್ದರಿಂದ ಉಂಟಾದ ಸಂತೋಷವನ್ನು ಅವರಿಬ್ಬರೂ ಕೂಡಲೇ ಊರನ್ನು ಬಿಡಬೇಕಾಗುತ್ತದೆ ಎಂಬ ಅರಿವು ಮಂಕುಮಾಡಿತು. ಚಂದ್ರಶೇಖರ ಕೆಲಸವನ್ನು ಹುಡುಕಬೇಕಾಗಿತ್ತು. ಅವನಿಗಿಂತ ಒಂದು ತರಗತಿ ಹಿಂದಿದ್ದ ಅಣ್ಣ ಓದನ್ನು ಮುಂದುವರಿಸಲು ಹೋಗಬೇಕಾಗಿತ್ತು. ತಂದೆ ಚಂದ್ರಶೇಖರನಿಗೆ ಸಲಹೆ, ಸಹಾಯಗಳನ್ನಿತ್ತರು; ತಾಯಿ ಮಗನಿಗೆ ಹಾಸ್ಟಲಿನಲ್ಲಿ ತಿನ್ನುವುದಕ್ಕೆಂದು ತಿಂಡಿಗಳನ್ನು ಮಾಡತೊಡಗಿದರು.

ಗೆಳೆಯರಿಬ್ಬರನ್ನೂ ಕಳುಹಿಸಿಕೊಡಲೆಂದು ಬೆಳದಿಂಗಳು ಬಂತು. ನಮಗೆ ಅದು ವೈಶಾಖದ ಶುಕ್ಲಪಕ್ಷವೆಂದು ಆಗ ನೆನಪಿಗೆ ಬಂತು. ಪೂರ್ಣಿಮೆಯಂದು, ಬೆಳದಿಂಗಳದೂಟ ಮಾಡಬೇಕೆಂದೂ, ಅದು ವರೆಗೂ ಅವರು ಹೋಗಬಾರದೆಂದೂ ತಾಯಿ ಹೇಳಿದರು. ಇಬ್ಬರೂ ಸಂತೋಷದಿಂದ ಒಪ್ಪಿದರು.

ಚಂದ್ರ ಬೆಳೆದಂತೆ ನಮ್ಮಿಬ್ಬರಲ್ಲಿ ನೆರಳಿನ ಹುತ್ತಗಳು ಬೆಳೆದವು. ಪೂರ್ಣಿಮೆ ಹತ್ತಿರ ಬಂದಂತೆ ಅಮಾವಾಸ್ಯೆಯೂ ಹತ್ತಿರ ಬರತೊಡಗಿತು. ಪೂರ್ಣಿಮೆಯ ರಾತ್ರಿಗೆ ಸ್ವಾಗತ ಸಿದ್ಧವಿತ್ತು. ಆದರೆ ಸ್ವಾಗತದ ಹಿಂದೆಯೇ ದುಗುಡ ಹೆಡೆಯಾಡುತ್ತಿತ್ತು. ಪೂರ್ಣಿಮೆಯ ಮಗ್ಗುಲಿಗೆ ನಿಂತ ದಿನಗಳು ನಮ್ಮನ್ನು ಬೇರ್ಪಡಿಸುವ ಸಂಚು ಹೂಡಿ

ದ್ದವು. ಅವನಿಗೆ ಕೆಲಸ ಸಿಕ್ಕಿ, ಮದುವೆ ನಡೆಯಲು ಸಾಧ್ಯವಾಗುವ ವರೆಗೂ ನಾವು ಬೇರೆಯಾಗಿಯೇ ಇರಬೇಕು...

ಪೂರ್ಣಿಮೆಯ ದಿನ ಬಂತು; ರಾತ್ರಿ ಬಂತು; ಚಂದ್ರ ಬಂದ; ಬೆಳದಿಂಗಳು ಬಂತು, ಬಂದು ಹಡಗೆ ಹಾಲುಣಿಸಿ ನಿದ್ರೆ ಮಾಡಿಸಿತು. ನೆರಳಿನ ಹುತ್ತಗಳನ್ನು ಕರಗಿಸಿ ನೆಲಸಮ ಮಾಡಿತು. ಕೃಷ್ಣಪಕ್ಷ ವನ್ನು ಮರೆತು ಎಲ್ಲರೂ ನಲಿದಾಡಿದೆವು.

ಊಟವಾಯಿತು. ಮಾತುಕತೆಯಾಯಿತು. ಆರು ಜೊತೆ ಕಣ್ಣುಗಳಲ್ಲಿ ಚಂದ್ರ ಕುಣಿಯುತ್ತಿದ್ದ....ಚಂದ್ರ ನೆತ್ತಿಗೇರಿದ. ಆಕಳಿ ಕೆಯ ಮೇಳ ಮಾತುಕತೆಗೆ ಮಧ್ಯಮಾವತಿ ಹಾಡಿತು. ಒಬ್ಬೊಬ್ಬ ರಾಗಿ ನಿದ್ರಿಸಲು ಒಳಗೆ ನಡೆದರು. ತಂಗಿ, ತಂದೆ, ತಾಯಿ, ಅಣ್ಣ.... ನಮ್ಮಿಬ್ಬರಿಗೆಲ್ಲಿಯ ನಿದ್ರೆ ಅಂದು?

ಮನೆ ಚಿಕ್ಕದಾಗಿದ್ದರೂ ತೋಟ ದೊಡ್ಡದಾಗಿತ್ತು. ತಂದೆ ವಿಶೇಷ ಆಸಕ್ತಿಯಿಂದ ಬೆಳೆಸಿದ್ದ ಗಿಡ, ಮರಗಳು ತೋಟವನ್ನು ತುಂಬಿದ್ದವು. ಶಿಲಾಸನಕ್ಕೆ ಹೊಂದಿಸಿದ ಮಾವಿನ ಮರ ನಮ್ಮ ತಲೆಯ ಮೇಲೆ ಹಸಿರು ಒಂದರಿಯನ್ನು ಹಿಡಿದಿತ್ತು. ಶುದ್ಧವಾಗಿ ಹರಿದು ಬಂದ ಬೆಳ್ಳಿ—ಹಸಿರು ಬೆಳಕು ನೆರಳು ನುಂಗಿದ ನೆಲಕ್ಕೂ ಬೆಳ್ಳಿ ಬಳಿಯುವ ಸಾಹಸವನ್ನು ಮಾಡುತ್ತಿತ್ತು.

ಬೆಳುದಿಂಗಳಿನಿಂದ ಬಂತು ಧ್ವನಿ; “ ವಿಜಯಾ, ಹಾಡು ಹೇಳು ”.

ಹಾಡು ತುಟಿಯನ್ನು ದಾಟಿ ಬರುವ ಮುನ್ನವೆ ಮನೆ ಒಳಗಿ ನಿಂದ ಬಂತು ತಂಗಿಯ ಕರೆ, “ಅಕ್ಕ, ಅಕ್ಕ . ”

ಧ್ವನಿಯತ್ತ ನಗೆಯನ್ನು ತೇಲಿಬಿಟ್ಟು ಎದ್ದೆ. ಬೆಳದಿಂಗಳಿನಿಂದ ಬಂದ ಒಂದು ಕೈ ನನ್ನ ಕೈಯನ್ನು ಹಿಡಿಯಿತು; ಬೇಡಿತು: “ಮತ್ತೆ ಬಾ” ಕೈಗೆ ಕೈ ಸಮ್ಮತಿ ಸೂಚಿಸಿತು.

ಲಗುಬಗೆಯಿಂದ ಒಳಗೆ ನಡೆದೆ. ನಿದ್ದೆ ಕಣ್ಣಿನ ತಂಗಿಯ

ಅಪೇಕ್ಷೆಯ ಮೇರೆಗೆ ಅವಳು ನಿದ್ರಿಸುವ ವರೆಗೂ ಅವಳ ಬಳಿ ಕುಳಿತಿದ್ದೆ. ಬಳಿಕ ಅವಳ ಹೊದಿಕೆಯನ್ನು ಸರಿಪಡಿಸಿ ಹೊರಗೆ ಬಂದೆ.

ಮನೆ ಬಾಗಿಲನ್ನು ದಾಟಿ ವರಾಂಡಕ್ಕೆ ಬಂದವಳು ನೆಲದ ಮೇಲೆ ಚೆಲ್ಲಿದ್ದ ನೆರಳನ್ನು ಕಂಡು ಬೆಚ್ಚಿದೆ. ನೆಲದುದ್ದ ಬುದ್ಧನಾಕೃತಿಯ ನೆರಳು ಹಬ್ಬಿತ್ತು. ಆಶ್ಚರ್ಯದಿಂದ ಅದರ ಮೂಲವನ್ನು ಹುಡುಕಿದೆ. ಚಂದ್ರಶೇಖರ! ಚಂದ್ರನನ್ನು ನೋಡುತ್ತಾ ಕುಳಿತಿದ್ದ ನಿಶ್ಚಲ ದೇಹ ನೆರಳಿನಲ್ಲಿ ಬುದ್ಧನಾಗಿ ಪರಿಣಮಿಸಿತ್ತು. ಒರಗಿದ ಕಂಬ ಬೋಧಿವೃಕ್ಷವಾಗಿತ್ತು. ನೆರಳು ಎಲ್‌ಗ್ರೆಕೊನ್ ಶೈಲಿಯಯಲ್ಲಿತ್ತು. ಉದ್ದದ ಮೈ, ಮುಗಿಲಲ್ಲಿ ತಲೆ. ನೆರಳನ್ನು ನೋಡಿ ನನಗೆನಿಸಿತು: ಎಲ್‌ಗ್ರೆಕೊ ಬುದ್ಧನನ್ನು ಚಿತ್ರಿಸಬಾರದಾಗಿತ್ತೆ? ಎಷ್ಟು ಸಂಕೇತಾತ್ಮಕವಾಗಿರುತ್ತಿತ್ತು ಚಿತ್ರ!

ಸೀರೆ ನಿರಿಯ ನೂಪುರ ಅವನನ್ನು ಎಚ್ಚರಿಸಿತು. ಆನಂದದ ನಗೆಯೊಂದಿಗೆ ಮುಂದೆ ಬಂತು ಅವನ ಕೈ. ದಿನದ ಒಲವಿನೊಂದಿಗೆ ಅದೇ ಆಗ ಬೆರೆತಿದ್ದ ಗೌರವದಿಂದ ಮೃದುವಾದ, ವಿಧೇಯವಾದ ನನ್ನ ಕೈಯನ್ನು ಹಿಡಿಯಿತು; ಮತ್ತೆ ಶಿಲಾಸನಕ್ಕೆ ಕರೆದೊಯ್ಯಿತು. ನಾವು ಬರುವ ಹೊತ್ತಿಗೆ ಚಂದ್ರ ಅಸನಕ್ಕೆ ಬೆಳ್ಳಿದಾರದಲ್ಲಿ ನೇಯ್ದ ಬಟ್ಟೆಯನ್ನು ಹಾಸಿದ್ದ; ತಂಪು ಸುಗಂಧವನ್ನು ಚಿಮುಕಿಸಿದ್ದ, ಸುವಾಸಿತ ಹಸಿರು ಕೊಡೆಯನ್ನು ಹಿಡಿಸಿದ್ದ.

"ಹಾಡು"

ಹಾಡಿದೆ. ಹಾಡು ಮುಗಿಯುತ್ತಲೂ ಅಂದ "ಇನ್ನೂ ಹಾಡು."

ಇನ್ನೂ ಹಾಡಿದೆ. ಅವನ ಕೈ ನನ್ನದನ್ನು ಬಿಟ್ಟಿತು. ಬಲವಾಗಿ ಅವನಿಂದ ಬಂದ ವಿಶ್ವಾಸದ ಬೆಚ್ಚಗಿನ, ಅದೃಶ್ಯ ತರಂಗ ನನ್ನನ್ನು ಸುತ್ತುಗಟ್ಟಿತು; ಧ್ವನಿಯನ್ನು ಮೃದುಗೊಳಿಸಿತು. ಅವನ ಬಗೆಗಿದ ಒಲವು, ಅವನ ಸಾನ್ನಿಧ್ಯದಿಂದ ಉಂಟಾದ ಮನೋಲ್ಲಾಸ, ಚಂದ

ಕೊಟ್ಟ ಚೇತನ, ರಾತ್ರಿ ಕೊಟ್ಟ ಶಾಂತಿ, ಇವೆಲ್ಲದರಿಂದ ರೂಪಿತವಾಗಿ ಗಾನ ಹೊರಹೊಮ್ಮಿತು. ಒಂದು ರಾಗದ ಆರಾಧನೆ ಮುಗಿದ ಮೇಲೆ ನಿಲ್ಲಿಸಿದೆ. ಏಕದೃಷ್ಟಿಯಿಂದ ನನ್ನನ್ನೇ ನೋಡುತ್ತಿದ್ದವನು, ''ಇನ್ನೊ'' ಎಂದ. ರಾಗ ರಾಗಕ್ಕೆ ಕರೆದೊಯ್ದಿತು; ರಾಗ ರಾಗವನ್ನು ಸ್ವಾಗತಿಸಿತು; ರಾಗ ರಾಗವನ್ನು ಬೀಳ್ಕೊಟ್ಟಿತು....ಅವನು ನಿಶ್ಚಲನಾಗಿ ಕುಳಿತಿದ್ದ. ಬೆಳದಿಂಗಳು ತುಂಬಿದ ಕಣ್ಣುಗಳಲ್ಲಿ ಹೊಳೆಯುತ್ತಿದ್ದ ಅನೇಕ ಬಿಂದುಗಳು ಕೂಡಿದ್ದವು ...ತಾಯಿ ಒಮ್ಮೆ ಹಣಕಿ ಹಾಕಿ ಹೋದದ್ದು ನನಗೆ ಕಾಣಿಸಿತ್ತು. ಅವನಿಗೆ ಕಾಣಿಸಿರಲಿಲ್ಲವೇನೊ. ನಾನಾದರೂ ಕಾಣಿಸುತ್ತಿದ್ದೆನೊ?

ಹಾಡು ನಿಂತ ಕ್ಷಣದ ವರೆಗೆ ಮೌನ ನೆಲಸಿತ್ತು. ಅವನಿಗೆ ನನ್ನ ಹಾಡುಗಾರಿಕೆ ಇಷ್ಟವಾಗಲಿಲ್ಲವೇನೋ ಎಂದು ಶಂಕಿಸುತ್ತಿದ್ದಾಗ ನುಡಿದ. ''ಏನು ಅದ್ಭುತ ಧ್ವನಿ ನಿನ್ನದು, ವಿಜಯಾ!'' ಅವನ ಧ್ವನಿ ಭಾರವಾಗಿತ್ತು, ಹಗುರವಾಗಿತ್ತು. ಆನಂದದಿಂದ ಎದ್ದಿತು ತಲೆ, ನಾಚಿಕೆಯಿಂದ ಬಾಗಿತ್ತು ಕತ್ತು.

ಗಂಭೀರನಾಗಿ ಅಂದ: ''ಅಸಾಧಾರಣ ಧ್ವನಿ, ಪ್ರತಿಭೆ ನಿನ್ನದು. ಇವುಗಳನ್ನು ಬೆಳಿಸಿಕೊಳ್ಳಬೇಕು ನೀನು. ಬೆಳಿಸಿಕೊಂಡು ನೂರಾರು ಜನರಿಗೆ ಆನಂದ ಕೊಡಬೇಕು."

ಆನಂದವನ್ನು ಮೆಟ್ಟಿ ಬಂತು ಭಯ.

''ನಿಮಗೆ ಮರುಳು. ನನ್ನ ಧ್ವನಿಯಲ್ಲೇನೂ ಅಸಾಮಾನ್ಯತೆ ಇಲ್ಲ. ತೀರ ಕೆಟ್ಟದಾಗಿಲ್ಲವೇ ಹೊರತು...."

ಭಯವನ್ನು ಕತ್ತರಿಸಲು ಬಂತು ಉತ್ಸಾಹ. ''ತೀರ 'ಕೆಟ್ಟದಾಗಿಲ್ಲ!' ಎಂತಹ ಸುಂದರ ಧ್ವನಿ, ಎಷ್ಟು ಪರಿಣಾಮಕಾರಿ ಹಾಡುವಿಕೆ ನಿನ್ನದು! ಅವು ನನಗೀಗ ಎಂಥಹ ದೃಶ್ಯವನ್ನು ತೋರಿಸಿದವು, ಗೊತ್ತೇ?"

ತಲೆಯನ್ನಾಡಿಸಿದೆ.

"ಮಗುವಿನ ನಗೆಯಿಂದ ಬೆಳಗದ ಕತ್ತಲು ಜಗತ್ತಿಗೆ ಉರುಲಾಗ ತೊಡಗಿತ್ತು.

ತಾಯಿ ಮಾಯಾದೇವಿ-ಪೃಥ್ವಿ, ತಂದೆ ಶುದ್ಧೋಧನ ಸಂತಾನಕ್ಕಾಗಿ ಹಂಬಲಿಸಿದರು. ಅರಮನೆಗೆ ದೀಪಕಲಶದ ಅವಶ್ಯಕತೆ ಇತ್ತು; ಜಗತ್ತಿಗೆ ಬೆಳಕು ಕೈಯ ಅವಶ್ಯಕತೆಯಿತ್ತು. ಇಬ್ಬರೂ ಪರಮಾತ್ಮನನ್ನು ಬೇಡಿದರು. ವರವನ್ನು ಪಡೆದರು....

ಅಂಧಕಾರಮಯ ರಂಗಸ್ಥಳದ ಮೇಲೆ ನಲಿಯುತ್ತ ಬಂದಳು ಗುಲಾಬಿ ವಸ್ತ್ರಧಾರಿಣಿ ಸೌಂದರ್ಯ; ಒಲಿಯುತ್ತ ಬಂದಳು ನಸು ಕೆಂಪು ವಸ್ತ್ರಧಾರಿಣಿ: ಪ್ರೇಮ. ಗಾಂಭೀರ್ಯದ ನಡಿಗೆಯಲ್ಲಿ ಬಂದು ಸೇರಿದ ಶ್ವೇತ ವಸ್ತ್ರಧಾರಿ: ಸತ್ಯ. ಕುಣಿಯುತ್ತಾ ಬಂದರು ಮಕ್ಕಳಿಬ್ಬರು ಹಸಿರು ನೀಲಿ ಉಡಿಗೆಯಲ್ಲಿ: ದಯೆ, ಶಾಂತಿ. ಕಡೆಗೆ ರಾಜಠೀವಿಯಲ್ಲಿ ಬಂತೊಂದು ಭವ್ಯಾಕೃತಿ, ಪ್ರಕಾಶನೀಯ ಹೊನ್ನಿನುಡುಗೆಯಲ್ಲಿ: ಜ್ಞಾನ! ಮೊದಲು ಬಂದವರೆಲ್ಲರೂ ಅವನ ಆಶ್ರಯ ಪಡೆದು ನಿಂತರು; ನೋಡು ನೋಡುತ್ತಿದ್ದಂತೆಯೆ ಅವನಲ್ಲಿ ಐಕ್ಯರಾದರು. ಶಾಂತ ಮುಖಭಾವದಿಂದ ನಿಂತಿದ್ದ ಅವನು. ಬಂದು ಸೇರಿದ ಬಣ್ಣದ ಛಾಯೆಗಳೆಲ್ಲವೂ ಅವನಲ್ಲಿ ಮಿರುಗುತ್ತಿದ್ದವು....

ಮುಂಪೆ ಕಂಡೆ....

ಸಿದ್ಧಾರ್ಥ ಕತ್ತರಿಸಿ ಎಸೆದ ಕೂದಲು ಜ್ವಾಲೆಯ ಎಳೆಗಳಾದವು: ಜಗತ್ತನ್ನು ಮುತ್ತಿದ ಕತ್ತಲೆಗೆ ಬೆಂಕಿ ಇಟ್ಟವು. ಅಂತ್ಯ ಸಂಸ್ಕಾರಗಳು ಕೊನೆಗೊಂಡ ಮೇಲೆ ಮರಳಿ ಬಂದವು.

ಅಷ್ಟು ಹೊತ್ತಿಗೆ ಸಿದ್ಧಾರ್ಥ ಬುದ್ಧನಾಗಿದ್ದ. ಪ್ರಪಂಚದಲ್ಲಿ ಕತ್ತಲೆ ಹೇಳ ಹೆಸರಿಲ್ಲದಂತಾಗಿತ್ತು. ಬೆಳಕು ಹಾಡತೊಡಗಿತ್ತು.

ಮರಳಿ ಬಂದ ಜ್ವಾಲೆಯ ಎಳೆಗಳು ಬುದ್ಧನಿಗೆ ನಮಿಸಿ ನಿಂತವು. ಅವನ ಪಾದಸ್ಪರ್ಶದ ತಂಪನ್ನು ಪಡೆದು ಹೊನ್ನಿನ ಕಿರಣಗಳಾಗಿ ಮಾರ್ಪಟ್ಟವು. ಮೇಲೇರಿದವು. ವರ್ತುಲಾಕಾರವಾಗಿ ಕೂಡಿದವು.

ಬುದ್ಧನ ತಲೆಯ ಹಿಂದೆ ಸ್ಥಾಪಿತವಾದವು...."

"ಇದು ನನ್ನ ಹಾಡಿನ ಪರಿಣಾಮವಲ್ಲ. ನಿಮ್ಮ ಕಲ್ಪನೆಯೆ ಇದಕ್ಕೆ ಕಾರಣ."

"ಆದರೆ ಕಲ್ಪನೆಯ ಮೀಟುಕೋಲು, ಸೂತ್ರಧಾರ ನಿನ್ನ ಹಾಡು....ನಿನ್ನಲ್ಲಿ ದಿವ್ಯವಾಣಿ ಇದೆ, ವಿಜಯಾ!"

"ಹಾಗೆಲ್ಲಾ ಅನ್ನಬೇಡಿ. ನನಗೆ ಭಯವಾಗುತ್ತದೆ."

"ನಿನ್ನಲ್ಲಿರುವ ಮಹತ್ವವನ್ನು ಕಂಡು ನಿನಗೇ ಭಯವೇ ?"

"ಎಷ್ಟು ದೊಡ್ಡ, ದೊಡ್ಡ ಪದಗಳು. ನನ್ನ ಹಾಡನ್ನು ನೀವು ಮೆಚ್ಚಿದರೆ ಸಾಕು."

"ಇಲ್ಲ, ಸಾಲದು. ಅದನ್ನು ನಾನೊಬ್ಬನೆ ಅನುಭವಿಸಿದರೆ ನಾನು ಸ್ವಾರ್ಥಿ, ಪಾಪಿ!"

ನಕ್ಕು, 'ಸ್ವಾರ್ಥಿ, ಪಾಪಿ'ಯ ಬಾಯಿ ಮುಚ್ಚಲು ಹವಣಿಸಿದೆ.

* * *

ಚಂದ್ರಶೇಖರನಿಗೆ ಹೈದ್ರಾಬಾದಿನಲ್ಲಿ ಕೆಲಸ ಸಿಕ್ಕಿತು. ರಜ ಸಿಕ್ಕಿದೊಡನೆಯೆ ಮದುವೆ ಮಾಡಿಕೊಳ್ಳಲು ಬರುತ್ತೇನೆಂದು ಕಾಗದ ಬರೆದ.

ಹೈದ್ರಾಬಾದಿನಲ್ಲಿ ಆಗ ನಡೆಯುತ್ತಿದ್ದ ರಜಾಕಾರರ ಗಲಭೆಗಳ ವರದಿಯನ್ನು ಪತ್ರಿಕೆಗಳಲ್ಲಿ ಓದಿ ನಮಗೆ ಭಯವಾಗುತ್ತಿತ್ತು. ಹೆದರಿದ ಜನರು ಸಂಸ್ಥಾನವನ್ನು ಬಿಟ್ಟು ಹೊರಗೆ ಬರುತ್ತಿದ್ದಾರೆಂದು ಕೇಳಿ. ಈ ಸಮಯದಲ್ಲಿ ಇವನು ಅಲ್ಲಿಗೆ ಹೋಗಬೇಕಾಯಿತೆ ಎನಿಸುತ್ತಿತ್ತು. ಆದರೆ, ಭಯವೇನೂ ಇಲ್ಲವೆಂದೂ, ವರದಿಗಳು ಅತಿಶಯೋಕ್ತಿಗಳೆಂದೂ ಚಂದ್ರಶೇಖರ ಬರೆಯುತ್ತಿದ್ದುದರಿಂದ ನಮಗೆ ಸ್ವಲ್ಪ ನೆಮ್ಮದಿ ಇದ್ದಿತ್ತು.

ಒಂದು ದಿನ ತಂದೆಗೆ ಅವನಿಂದ ಕಾಗದ ಬಂದಿತು. ಇನ್ನೆರಡು ತಿಂಗಳಿಗೆ ಮೂರು ವಾರಗಳಷ್ಟು ರಜೆ ಸಿಕ್ಕುತ್ತದೆ....

ನನಗೆ ಬರೆದ "ವಿಜಯಾ, ಇನ್ನೆರಡು, ಮೂರು ತಿಂಗಳಲ್ಲಿ ಮತ್ತೆ ವೈಶಾಖ ಶುದ್ಧ ಪೂರ್ಣಿಮೆ! ನಮ್ಮ ಬಾಳಿನ ಬಾನಿನಲ್ಲೂ ಪೂರ್ಣಚಂದ್ರ ಮೂಡಿ ಬರಲಿದ್ದಾನೆ. ಆದರೆ ಒಂದು ವ್ಯತ್ಯಾಸವಿದೆ. ಪೂರ್ಣಿಮೆಯ ಹಿಂದೆ ಕೃಷ್ಣಪಕ್ಷ ಕಾದಿರುತ್ತದೆ. ನಮ್ಮ ಜೀವನದಲ್ಲಿ ಪೂರ್ಣಿಮೆಯ ಪಾಡ್ಯವಾಗುತ್ತದೆ!

ನಿರೀಕ್ಷಣೆಯ ಆನಂದದಲ್ಲಿ ಮೈಮರೆತಿದ್ದವಳನ್ನು ತಾಯಿ ತಮ್ಮ ಸಂಬಂಧವರೊಬ್ಬರ ಮನೆಯ ಮದುವೆಗೆ ಕರೆದೊಯ್ದರು. ಮದುವೆಯ ಸಡಗರದ ಮಧ್ಯದಲ್ಲೂ ಕನಸುಗಳ ದಿಬ್ಬಣ ಅವ್ಯಾಹತವಾಗಿ ಸಾಗಿತ್ತು.

ಮದುವೆ ಮುಗಿಸಿಕೊಂಡು ತಾಯಿ ಊರಿಗೆ ಮರಳಿದರು. ಪರೀಕ್ಷೆ ಮುಗಿಸಿಕೊಂಡು ನೇರವಾಗಿ ಅಲ್ಲಿಗೆ ಬಂದಿದ್ದ ಅಣ್ಣ ತಾಯಿಯ ಜೊತೆ ಹೊರಟ. ನೆಂಟರು ಒಲವಂತಮಾಡಿ ನನ್ನನ್ನು ಅಲ್ಲಿಯೆ ಒಂದು ವಾರದ ಕಾಲ ಉಳಿಸಿಕೊಂಡರು.

ಊರಿಗೆ ಹೊರಡುವ ಹಿಂದಿನ ಪೇಟೆಗೆ ಹೋಗಿದ್ದೆ. ಅಲಕ್ಷ್ಯದಿಂದ ಸಾಗುತ್ತಿದ್ದ ಕಣ್ಣುಗಳು ಒಂದು ಗಾಜಿನ ಕಪಾಟಿನ ಮುಂದೆ ನಿಂತವು. ಮುಂದೆ ಹೋಗದಾದವು. ಗಾಜಿನ ತೆರೆಯ ಹಿಂದೆ ಮಂದಸ್ಮಿತ ಬೀರುತ್ತಿತ್ತು ಬುದ್ಧನ ಪ್ರತಿಮೆ! ಬುದ್ಧ-ವೈಶಾಖ ಶುದ್ಧ ಪೂರ್ಣಿಮೆ-ಚಂದ್ರಶೇಖರ!

ಅಂಗಡಿಯಿಂದ ಹೊರಬಂದಾಗ ನನ್ನ ಕೈಯಲ್ಲಿ ಜಾಗರೂಕತೆಯಿಂದ ಕಟ್ಟಿದ್ದ ಒಂದು ಮರದ ಪೆಟ್ಟಿಗೆಯಿತ್ತು.

ಪ್ರತಿಮೆಯನ್ನು ವೈಶಾಖ ಶುದ್ಧ ಪೂರ್ಣಿಮೆಯಂದು ಚಂದ್ರಶೇಖರನಿಗೆ ಕೊಡಬೇಕು. ಅಷ್ಟು ಹೊತ್ತಿಗೆ ನಮ್ಮ ಮದುವೆಯಾಗಿ ೧೦-೧೨ ದಿವಸಗಳಾಗಿರಬಹುದಲ್ಲವೆ?....

ಮರದ ಪೆಟ್ಟಿಗೆಯಲ್ಲಿ ಹಳದಿ ಹುಲ್ಲಿನ ಮಧ್ಯೆ ಪ್ರತಿಮೆಯನ್ನು ಇಡಲಾಗಿತ್ತು. ವಿಶೇಷ ಜಾಗರೂಕತೆಯಿಂದ ನನ್ನ ಪೆಟ್ಟಿಗೆಯಲ್ಲಿ

ಆ ಸಣ್ಣ ಪೆಟ್ಟಿಗೆಯನ್ನಿಟ್ಟೆ: ದೊಡ್ಡ ಪೆಟ್ಟಿಗೆಯಲ್ಲಿ ಮೆತ್ತನೆಯ ದಿಂಬು. ಅದರ ಮೇಲೆ ಮರದ ಪೆಟ್ಟಿಗೆ. ಅದರ ಸುತ್ತ ಸೀರೆಗಳನ್ನು ಸುತ್ತಿದೆ, ಜೋಡಿಸಿದೆ. ಬುದ್ಧನ ಪ್ರತಿಮೆಯ ಸುತ್ತಲೂ ವೈಲಿ, ವೈಲಿ ರೇಶಿಮೆ! ವ್ಯಂಗ್ಯವೆನಿಸಿತು!

ನಂಟರಿಂದ ಬೀಳ್ಕೊಂಡು ಊರಿನತ್ತ ಸಾಗಿದೆ.

* * *

ಸ್ಟೇಶನ್ನಿಗೆ ಬಂದಿದ್ದ ಅಣ್ಣ ನಾಲ್ಕು ತಿಂಗಳಿಂದ ಖಾಯಿಲೆ ಬಿದ್ದವನಂತೆ ಕಾಣಿಸಿದ. ಘಾಬರಿಯಿಂದ ಪ್ರಶ್ನಿಸಿದೆ: “ ವೈಗೆ ಹುಷಾರಿಲ್ಲವೆ, ಅಣ್ಣ?”

“ಇಲ್ಲದೆ ಏನು?” ಎಂದಿಷ್ಟೇ ಉತ್ತರಿಸಿ ಮುಂದೆ ನಡೆದ. ದೃಷ್ಟಿ ನನ್ನದರೊಡನೆ ಬೆರೆಯಲಿಲ್ಲ. ಗಾಡಿಯಲ್ಲಿ ಮಾತಿಲ್ಲದೆ ಕುಳಿತಿದ್ದ ಅಣ್ಣ. ಎಂದಿನಂತೆ ಹಾಸ್ಯವಿಲ್ಲ, ಹುಡುಗಾಟವಿಲ್ಲ. ಕೋಪವೆಂದು ತಿಳಿಯಬಹುದಾದ ಮೌನ. ಆದರೆ ನನ್ನ ಭುಜದ ಮೇಲೆ ಹಗುರ ವಾಗಿ ಒರಗಿದ. ಕೈ, ಏನೋ ಸಂಕಟವನ್ನು ಸೂಚಿಸುತ್ತಿತ್ತು. ಅನುಕಂಪವನ್ನು ತಿಳಿಸುತ್ತಿತು.

ಎನನ್ನೂ ಅರಿಯಲಾರದೆ ಹೋದೆ. ಮೌನವನ್ನು ಸಹಿಸಲಾರದೆ ಏನೇನೋ ಮಾತನಾಡತೊಡಗಿದೆ.

ಮನೆಯಲ್ಲೂ ಅದೇ ಮುಸುಕು. ಅಣ್ಣನ ಮೌನವನ್ನು ವಿಸ್ತರಿ ಸಿತ್ತು, ತಂದೆಯದು. ಘಾಬರಿಯಿಂದ ಮಾತನ್ನಾಡದೆ ನಿಂತಿದ್ದ ನನ್ನನ್ನು ನೋಡಿ ತಾಯಿ ಇದ್ದಕ್ಕಿದ್ದಂತೆ ಬಿಕ್ಕಿ, ಬೇರೆ ಕಡೆ ಮುಖ ವನ್ನು ಹೊರಳಿಸಿದರು. ಬಿಕ್ಕು ಕೋಣೆಯನ್ನು ತುಂಬಿದ್ದ ಬಿಗುವನ್ನು ಮುರಿಯಿತು. ತಂದೆ, ಅಣ್ಣನ ಮುಖಗಳು ಸಡಿಲವಾದವು, ಗೆರೆ ಗೂಡಿದವು.

ಎರಡು ದಿನಗಳ ಹಿಂದೆ ಚಂದ್ರಶೇಖರ ರಜಾಕಾರರ ಗುಂಡಿಗೆ ತುತ್ತಾಗಿ ಪ್ರಾಣ ಬಿಟ್ಟಿದ್ದ.

ಕಚೇರಿಯಿಂದ ತಿರುಗಿ ಬರುತ್ತಿದ್ದಾಗ ಬಸ್ಸಿನಲ್ಲಿ ಇದ್ದಕ್ಕಿದ್ದಂತೆ ಗಲಾಟೆ ಪ್ರಾರಂಭವಾಯಿತು. ಕಂಡಕ್ಟರ್ ರಜಾಕಾರನೊಬ್ಬನಿಗೆ ಕೊಡಬೇಕಾಗಿದ್ದ ಚಿಲ್ಲರೆಯ ವಿಷಯವಾಗಿ ಅವರಿಬ್ಬರಿಗೆ ವಾಗ್ವಾದ ಮೊದಲಾಯಿತು. ಬೆಲ್ಟಿನಲ್ಲಿ ಸಿಕ್ಕಿಸಿದ್ದ ಸಣ್ಣ ಬಂದೂಕವನ್ನು ತೆಗೆದು ರಜಾಕಾರ ಕಂಡಕ್ಟರ್ ಕಡೆಗೆ ಗುರಿಯಿಟ್ಟ. ಹಾರಿದ ಗುಂಡು ಬಸ್ಸಿನ ಚಲನೆಯಿಂದಾಗಿ ಕಂಡಕ್ಟರನ ಪಕ್ಕದಲ್ಲಿ ಸುಳಿದು, ಅವನ ಹಿಂದೆ ಕುಳಿತಿದ್ದ ಚಂದ್ರಶೇಖರನನ್ನು ಸೇರಿತು.

ಅಂತ್ಯ ಕ್ರಿಯೆಗಳನ್ನು ನಡೆಸಿದ ಸ್ನೇಹಿತರು ನಮ್ಮ ತಂದೆಯ ವಿಳಾಸವನ್ನು ದೊರಕಿಸಿಕೊಂಡು ಕಾಗದ ಬರೆದಿದ್ದರು. ಚಂದ್ರಶೇಖ ರನ ಅಣ್ಣನಿಗೂ ಬರೆದಿದ್ದರಂತೆ.

ತಂಗಿ ಶಾಲೆಯಿಂದ ಓಡಿ ಬರುವವರೆಗೂ ನಮ್ಮ ನಾಲ್ವರ ಪಾಲಿಗೆ ಮುರುಕು ಮಾತುಗಳು, ಮೌನ, ಕಣ್ಣೀರು, ಬಿಕ್ಕು. ಮನೆ ಗೊದಗಿದ ಆಘಾತವನ್ನು ಗುರುತಿಸದ ತಂಗಿ ಊಟಮಾಡಿ ಬಂದು ಕೇಳಿದಳು; "ಇದೇನಕ್ಕ, ಇನ್ನೂ ಪೆಟ್ಟಿಗೆಯಿಂದ ಸಾಮಾನೇ ತೆಗೆ ದಿಲ್ಲ?....ನಾನು ತೆಗೆದಿಡಲೇ?" ಸಮ್ಮತಿ ಸೂಚಿಸಿ ಬೀಗದ ಕೈಯನ್ನು ಕೊಟ್ಟೆ. ಪೆಟ್ಟಿಗೆ ಇಟ್ಟಿದ್ದ ಪಕ್ಕದ ಕೋಣೆಗೆ ಹೋದಳು.

ಹತ್ತು ನಿಮಿಷದಲ್ಲಿ ಹಿಂತಿರುಗಿದಳು, "ಅಕ್ಕ, ನೀನು ಪ್ರತಿ ಮೇನ ಅಷ್ಟು ಜೋಪಾನವಾಗಿ ತಂದಿದ್ದೂ ದಂಡ."

ಆಸಕ್ತಿ ಇಲ್ಲದೆ ಪ್ರಶ್ನಿಸಿದೆ: "ಒಡೆದು ಹೋಗಿದೆಯೇ?

ತಂಗಿಯ ಬಾಯಿ ವಿಷಾದಿಂದ ವಕ್ರವಾಯಿತು.

"ನಿನಗೆ ಬೇಕೋ ನಾನೇ ಇಟ್ಟುಕೊಳ್ಳಲೋ ಅಕ್ಕ?"

"ಬೇಕಾದರೆ ಇಟ್ಟುಕೊಳ್ಳಮ್ಮ....ನನಗೇಕೆ?"

* * *

ನನಗೇಕೆ? ಚಂದ್ರಸೇಖರಿನಿಗೆಂದು ತಂದಿದ್ದ ಪ್ರತಿಮೆ. ಅವನಿಗೆ ಕೊಡಲಾಗದಮೇಲೆ ಅದು ನನಗೇಕೆ?

ಅವನಿಗೆ ತಗುಲಿದ ಗುಂಡಿನ ಒಂದು ಚೂರು ಪ್ರತಿಮೆಗೂ ತಗುಲಿತೇನೊ ? ಚಂದ್ರಶೇಖರ ಬೂದಿಯಾಗಿದ್ದ. ಪ್ರತಿಮೆ ಪುಡಿಯಾಗಿತ್ತೇನೊ....ತಂಗಿ ಅದನ್ನು ತನ್ನ ಕೋಣೆಗೆ ಒಯ್ದಿದ್ದಳು. ಊರಿಗೆ ಬಂದ ವೇಳೆ ನಾನದನ್ನು ನೋಡಿರಲಿಲ್ಲ. ನೋಡುವ ಮನಸ್ಸಾಗಲಿಲ್ಲ.

ಪ್ರತಿಮೆ ಪುಡಿಯಾಗಿತ್ತೇನೊ, ಅದರ ಚೂರುಗಳು ಎದೆಯೊಳಗೆ ನಾಟಿದ್ದವು. ಚೂಪು ತುದಿಗಳ ಕೊರೆತದಿಂದ ಗಾಯಗಳು ಆಳವಾಗುತ್ತಿದ್ದವು. ಚೂರುಗಳ ಹಿಂದೆಯೇ ಹಾರಿಬಂದ ಧೂಳು ಕಣ್ಣಿಗೆ ದಪ್ಪ ಪರದೆ ಹಾಕಿತ್ತು.

ಪೂರ್ಣಿಮೆಯಂದು ಚಂದ್ರಶೇಖರನಿಗೆ ಪ್ರತಿಮೆಯನ್ನರ್ಪಿಸಬೇಕೆಂದಿದೆ. ಅವನಿಗೆ ಬುದ್ಧನ ಬಗೆಗಿದ್ದ ಗೌರವ, ಒಲವುಗಳಿಗಾಗಿ, ನನಗೆ ಅವನಲ್ಲಿದ್ದ ಗೌರವ, ಒಲವುಗಳಿಗಾಗಿ ಅವನಿಗೆ ಬುದ್ಧನ ಪ್ರತಿಮೆಯನ್ನು ಕೊಡಬೇಕೆಂದಿದ್ದೆ. ಚಂದ್ರಶೇಖರ ಹೋದ; ಪ್ರತಿಮೆ ಹೋಯಿತು.

ಪೂರ್ಣಿಮೆ ಬಂತು. ಅದರ ಬೆನ್ನಿಗೆ ಬಂದ ಕೃಷ್ಣಪಕ್ಷ ಅನಂತವಾಗಿತ್ತು. ಕಾಳಸರ್ಪದ ಕತ್ತಲೆಯಲ್ಲಿ ಕಾಳಸರ್ಪದ ವಿಷ, ಘೋರತೆ ಇದ್ದುವು. ಕಾಳಸರ್ಪದಲ್ಲಿಲ್ಲದ ಒರಟು, ಚುಚ್ಚುವ ಬೆಂಕಿ ಇದ್ದವು.

ಮನಸ್ಸಿಗಾದ ಆಘಾತ ಧ್ವನಿಯನ್ನು ಬತ್ತಿಸಿತ್ತು. ಮಾತು ಸದ್ದಿಲ್ಲದೆ ನೆಲಸಮವಾಯಿತು. ಆ ಸ್ಥಳದಲ್ಲಿ ಒಣಮರದ ತಲೆಯ ಮೌನ ಬೇರೂರಿ ನಿಂತಿತು. ಮಾತಿಗೇ ಪ್ರವೇಶ ಇರದ ಹಾದಿಯಲ್ಲಿ ಹಾಡು ಸುಳಿಯುವುದು ಕೂಡಾ ಅಸಾಧ್ಯವಾಯಿತು.

ತಿಂಗಳೆರಡು ತಿಂಗಳುಗಳ ಬಳಿಕ ತಾಯಿ ಮತ್ತೆ ಮದುವೆಯ ಪ್ರಸ್ತಾಪವನ್ನು ಮಾಡತೊಡಗಿದರು. ಮದುವೆಯ ಮಾತು ಕಿವಿಗೆ ಮುಟ್ಟುತ್ತಲೂ ಕಣ್ಣುಗಳು, ಆ ಮಾತು ನನಗೆ ಎಷ್ಟು ಅಪ್ರೀಯ ಎನ್ನುವುದನ್ನು ಸೂಚಿಸುತ್ತಿದ್ದವು. ತಾಯಿ ಸಮಾಧಾನ

ಒಂದು ಕಣ್ಣಿವೆ ಊರುವಷ್ಟು ಜಾಗದಲ್ಲಿ ಮಾತ್ರ ಬಣ್ಣ ಹಾರಿತ್ತು. ಬಿಳಿಯ ಬದಲು ಮಣ್ಣು ಗೋಚರವಾಗಿತ್ತು.

ಆಶ್ಚರ್ಯ ನನ್ನನ್ನಾವರಿಸಿತು: ಪ್ರತಿಮೆ ಒಡೆದಿಲ್ಲ. ಒಂದು ಚೂರು ಮಣ್ಣು ಮಾತ್ರ ಎಗರಿ ಹೋಗಿದೆ, ಅಷ್ಟೆ.

ಬುದ್ಧ ಬೆಳದಿಂಗಳಿನ ಮಾತಿನಲ್ಲಿ ನುಡಿದ: "ಒಲವು ಮರಣ ಹೊಂದಿದಾಗ ಅಥವಾ ನಮ್ಮ ಪಾಲಿಗೆ ಇಲ್ಲವಾದಾಗ, ಸುಂದರ ಪ್ರತಿಮೆ ಚೂರು ಚೂರಾಯಿತು ಎಂದು ತಿಳಿಯುತ್ತೇವೆ. ಚೂರುಗಳ ಹುಡಿ ಕಣ್ತುಂಬ ಕುಳಿತು ಕತ್ತಲೆ ತಂದಿತು ಎಂದುಕೊಳ್ಳುತ್ತೇವೆ. ಸ್ವಲ್ಪ ಕಾಲ ಕಳೆದ ನಂತರ ನಿಜಸ್ಥಿತಿಯ ಅರಿವಾಗುತ್ತದೆ. ಪ್ರತಿಮೆ ಒಡೆಯು ಲಿಲ್ಲ; ಒಂದು ಚೂರು ಮಾತ್ರ ಮಾಯವಾಗಿದೆ, ಅಷ್ಟೆ."

ಆಶ್ಚರ್ಯ ನೆಮ್ಮದಿ, ಆದಂದಗಳಿಗೆ ಬಾಗಿಲು ತೆರೆಯಿತು.

ವರ್ಷದಿಂದ ಒಡನಾಡಿಯಾಗಿದ್ದ ಖಿನ್ನತೆ ಬಿಟ್ಟು ಹೋಗುವಾಗ ಪ್ರಶ್ನಿಸಿತು, ಚುಚ್ಚಿತು. ಮನ ಕೊರಗಿತು: 'ನಾವೇನೇನನ್ನೋ ಯೋಚಿಸಿದ್ದೆವು. ಏನೇನೋ ಯೋಜನೆಗಳನ್ನು ಚಿತ್ರಿಸಿದ್ದೆವು. ಒಂದೂ ನಡೆಯಲಿಲ್ಲ. ಏನೆಲ್ಲ ಮಾತನ್ನಾಡುವುದಿತ್ತು. ಏನೂ ಮಾಡಲಾಗಲಿಲ್ಲ....ನಾ ನ ವ ನ ನ್ನ ಒಮ್ಮೆ ಕೂಡ ಬಾಯ್ತುಂಬ "ಚಂದ್ರಶೇಖರ್" ಎಂದು ಕೂಗಲಾಗಿರಲಿಲ್ಲ....ಇನ್ನೂ ಬೇಕಾದಷ್ಟು ಕಾಲ ಇದೆ, ಎಂದುಕೊಂಡಿದ್ದೆವು. ಅವನಿಲ್ಲದೆ ನನ್ನದೆಂತಹ ಬಾಳು? ಜೀವಿಸಲು ಏನಿದೆ ನನಗೆ?

ಹೊಸದಾಗಿ ಬಂದ ಚಂದ್ರ ಕಿರಣವೊಂದು ಮಣ್ಣಿಗೆ ಬೆಳಕು ಬಳಿಯಿತು. ನಿಧಾನವಾಗಿ ಅಲ್ಲಿ ಚಂದ್ರಶೇಖರನ ಮುಖ ರೂಪ ಗೊಂಡಿತು. ಮುಖದ ಮೇಲೆ ಮೂಡಿ ಬಂದ ನಸುನಗು ಕಿರಣವನ್ನು ಮರೆಮಾಡಿತು. ನಸುನಗು ನುಡಿಯಿತು; ನೆನಪು ಮಾಡಿಕೊಟ್ಟಿತು. 'ನನ್ನ ಹಾಡನ್ನು ನೀವು ಮೆಚ್ಚಿದರೆ ಸಾಕು.' 'ಸಾಲದು, ನೂರಾರು ಜನರಿಗೆ ಆನಂದವನ್ನು ಕೊಡಬಲ್ಲೆ ನೀನು. ಕೊಡಬೇಕು ನೀನು!'

ಹೊರಹೊಮ್ಮಿತು ಮತ್ತೆ ಹಾಡು. ವರ್ಷಗಳಿಂದ ಬೆಳಕು ಕಾಣದಿದ್ದ ಧ್ವನಿ ತುಕ್ಕು ಹಿಡಿದಿತ್ತು. ಎರಡು ನಿಮಿಷಗಳಲ್ಲಿ ತುಕ್ಕು ಮಾಸಿತು. ಹಾಡಿನ ತಳದಲ್ಲಿದ್ದ ಶಾಂತಿಯನ್ನು ಕಂಡು ಮಣ್ಣಿನಲ್ಲಿ ಮೂಡಿದ್ದ ಮುಖ ತೃಪ್ತಿ, ಹಾರೈಕೆಗಳ ನಗುವೊಂದನ್ನು ಚೆಲ್ಲುತ್ತ ನಿಧಾನವಾಗಿ ಮರೆಯಾಯಿತು.

ಹಾಡು ನಿಲ್ಲಿಸಿದ ಮರುಕ್ಷಣವೆ ಕೇಳಿ ಬಂತು ತಂಗಿಯ ಧ್ವನಿ: "ಎಷ್ಟು ಚೆನ್ನಾಗಿ ಹಾಡಿವೆ ಅಕ್ಕ. ತುಂಬಾ ದಿನಗಳಾಗಿದ್ದವು ನೀನು ಹಾಡಿ."

ಅವಳ ತಲೆ ಸವರುತ್ತ ಉತ್ತರಿಸಿದೆ: ಇನ್ನು ಮೇಲೆ ಮತ್ತೆ ಹಾಡುತ್ತೇನಮ್ಮ!'

* * *

ಮನಸ್ಸು ನಿರ್ಧಾರಕ್ಕೆ ಬಂದಿದೆ. ತಾಯಿ ಹೇಳಿದವನನ್ನು ಮದುವೆಯಾಗುತ್ತೇನೆ. ಬುದ್ಧ ಸೂಚಿಸಿದ ಸತ್ಯವನ್ನು ನೆನಪಿನಲ್ಲಿಟ್ಟು ಕೊಂಡು ಜೀವಿಸುತ್ತೇನೆ. ಚಂದ್ರಶೇಖರ ಹೇಳಿದ-ವಿಧಿಸಿದ-ಮಾತನ್ನು ಪಾಲಿಸುತ್ತೇನೆ.

ಇಂದು ವೈಶಾಖ ಶುದ್ಧ ಪೂರ್ಣಿಮೆ. ಇಂದು ನನ್ನಲ್ಲಿ ಶಾಂತಿ ತುಂಬಿದೆ. ಮುಂದಿನ ವೈಶಾಖ ಶುದ್ಧ ಪೂರ್ಣಿಮೆಯ ಹೊತ್ತಿಗೆ ನನಗೆ ಮದುವೆಯಾಗಿರುತ್ತದೆ. ನನ್ನ ಬಾಳು ಸುಖಮಯವಾಗಿರ ಬಹುದು, ಇಲ್ಲದಿರಬಹುದು. ಆದರೆ ಇಂದು ತುಂಬಿರುವ ಶಾಂತಿ ಅಂದೂ ಇರುತ್ತದೆ ಎನ್ನುವುದು ನಿಸ್ಸಂದೇಹವಾಗಿ ಗೊತ್ತಿದೆ.



# ಸ್ಕಾಲರ್ ಜಿಪ್ಸಿ

ಚಿಕ್ಕಪ್ಪ ಊರಿನಿಂದ ತಂದ ಕನ್ನಡ ಪತ್ರಿಕೆಗಳನ್ನು ನೋಡು ತ್ತಿದ್ದೆ.

ವಾರಪತ್ರಿಕೆಯೊಂದರಲ್ಲಿ ನಾಟಕದ ಕಂಪನಿಯೊಂದರ ಜಾಹೀ ರಾತು ಕಣ್ಣಿಗೆ ಬಿತ್ತು. ಕಂಪನಿಯ ಹೆಸರನ್ನು ನಾನು ಕೇಳಿರಲಿಲ್ಲ. ನಟನಟಿಯರ ಹೆಸರನ್ನು ಕೇಳಿರಲಿಲ್ಲ. ನಾಟಕದ ಹೆಸರನ್ನು ಕೂಡ ಕೇಳಿರಲಿಲ್ಲ. ಜಾಹೀರಾತಿನ ಮೂಲೆಯಲ್ಲಿ ಅಚ್ಚಾಗಿದ್ದ ಪ್ರಮುಖ ನಟನ ಚಿತ್ರವನ್ನು ನೋಡಿ ಆಕರ್ಷಿತಳಾದೆ. ಚಿಕ್ಕಪ್ಪನನ್ನು ಕಂಪ ನಿಯ ವಿಷಯವಾಗಿ ಪ್ರಶ್ನಿಸಿದೆ.

ಕ್ಷಣಕಾಲ ಸುಮ್ಮನಿದ್ದು ನಂತರ ಹೇಳಿದ: 'ನಾಟಕದ ಕಂಪನಿ ಹೊಸದು. ಹೊಸ ರೀತಿಯ, ಉತ್ತಮ ಸಾಮಾಜಿಕ ನಾಟಕಗಳನ್ನಾಡಿ ಜನರ ಮನ್ನಣೆ ಗಳಿಸಿದೆ; ಮನ್ನಣೆ ಅಷ್ಟೆ, ಹಣವನ್ನಲ್ಲ. ಕಂಪನಿಯ ಮಾಲೀಕನೇ ಅದರ ಪ್ರಮುಖ ನಟ, ದಿಗ್ದರ್ಶಕ ಮತ್ತು ಲೇಖಕ.'

ಮತ್ತೊಮ್ಮೆ ಚಿತ್ರವನ್ನು ನೋಡಿದೆ. ಸಾಮಾನ್ಯ ಭಾರತೀಯ ನಟರಿಂದ ತೀರ ಭಿನ್ನವಾದ ಮುಖ. ಕೆದರಿದ ಕೂದಲು, ದಪ್ಪ ಹುಬ್ಬು, ಮೀಸೆ, ಟೂತ್‌ಪೇಸ್ಟ್ ಜಾಹೀರಾತಿನ ನಗೆ ಇವನಲ್ಲಿರಲಿಲ್ಲ ಸ್ವಲ್ಪ ಉದ್ದವಾದ ಮುಖ, ಸರಳವಾದ ರೇಖೆಗಳು; ಅಗಲವಾದ ಹಣೆಯ ಮೇಲೆ ಅಸ್ಪಷ್ಟವಾಗಿ ಕಾಣುತ್ತಿದ್ದ ಗೆರೆಗಳು, ಶಾಂತಿಯನ್ನು ತುಂಬಿಟ್ಟುಕೊಂಡ ಕಣ್ಣುಗಳು, ಆದರ್ಶ, ಆಕಾಂಕ್ಷೆಗಳನ್ನು ಸೂಚಿಸು ತ್ತಿದ್ದ ಬಾಯಿ. ಮುಖವನ್ನಾವರಿಸಿದ್ದ ಗಾಂಭೀರ್ಯ ಹಿನ್ನೆಲೆಯಲ್ಲಿಯೆ ಇದ್ದ ಅಸಾಧಾರಣ ಉತ್ಸಾಹದಿಂದ ಬೆಳಗಿತ್ತು: ಸೂರ್ಯೋದಯ ಕಾಲದಲ್ಲಿ ಸರೋವರ. ನೋಡಿದೊಡನೆಯೇ ಮನಸೆಳೆಯುವ

ಮುಖ....ಆಕರ್ಷಣೆ ಬಲಗೊಂಡು ಆಸಕ್ತಿಯಾಯಿತು.

ಚಿಕ್ಕಪ್ಪನನ್ನು ಕೇಳಿದೆ: 'ಇವನು ಯಾರು?'

ಚಿಕ್ಕಪ್ಪನ ಹಣೆ ಗೀರುಗೊಂಡಿತು. ನನ್ನ ಮುಖವನ್ನೊಮ್ಮೆ ನೋಡಿದ. ಎದುರಿಗಿದ್ದ ನನ್ನ ಪುಸ್ತಕದ ಬೀರುವನ್ನೊಮ್ಮೆ ನೋಡಿದ. ನಂತರ ನಿಧಾನವಾಗಿ ಉತ್ತರಿಸಿದ: 'ನಿನಗೊಂದು ಕತೆ ಹೇಳುತ್ತೇನೆ, ಕೇಳು.'

ಧ್ವನಿ ಆಳನಾಗಿತ್ತು.

* * *

ಅನಂತ, ನಾನು ಚಿಕ್ಕಂದಿನಿಂದಲೂ ಒಟ್ಟಿಗೆ ಬೆಳೆದವರು, ಒಟ್ಟಿಗೆ ಓದಿದವರು. ತಾಯಿ ಇಲ್ಲದ ಹುಡುಗನೆಂದು ನಮ್ಮ ಮನೆಯವರು ಅವನನ್ನು ವಿಶ್ವಾಸದಿಂದ ಕಾಣುತ್ತಿದ್ದರು.

ಚಿಕ್ಕವನಾಗಿದ್ದಾಗಿನಿಂದ ಅನಂತನಿಗೆ ನಾಟಕದ ಹುಚ್ಚು ಬಹಳ. ಊರಿಗೆ ಬಂದ ಕಂಪನಿಗಳ ನಾಟಕಗಳೆಲ್ಲವನ್ನೂ ನೋಡದೆ ಬಿಡುತ್ತಿರಲಿಲ್ಲ. ಸ್ನೇಹಿತರನ್ನು ಕೂಡಿಸಿ ಮನೆಯಲ್ಲಿಯೆ ನಾಟಕಗಳನ್ನು ಆಡಿಸುತ್ತಿದ್ದ, ಆಡುತ್ತಿದ್ದ.

ಕಾಲೇಜಿಗೆ ಹೋದ ಮೇಲೆ ಅವನ ಹುಚ್ಚು ಇಮ್ಮಡಿಸಿತು. ಬುದ್ಧಿವಂತನಾದ್ದರಿಂದ ಪರೀಕ್ಷೆಗಳಲ್ಲಿ ಫೇಲಾಗದೆ ಬರುತ್ತಿದ್ದ. ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ಬಳಿಕ ತನ್ನ ಮೆಚ್ಚಿನ ವಿಷಯವಾದ ಇತಿಹಾಸದ ಆನರ್ಸ್ ತರಗತಿಗೆ ಸೇರಿದ.

ಅವನು ಮೊದಲನೆಯ ಆನರ್ಸ್‌ನಲ್ಲಿದ್ದಾಗ ಅವನ ತಂದೆ ಸತ್ತುಹೋದರು. ಈ ಅಘಾತದಿಂದ ಚೇತರಿಸಿಕೊಳ್ಳಲು ಅವನಿಗೆ ಸ್ವಲ್ಪ ಕಾಲ ಹಿಡಿಯಿತು. ಪರೀಕ್ಷೆಯನ್ನು ಮುಗಿಸಿಕೊಂಡು ಅವನ ದೊಡ್ಡಪ್ಪನಿದ್ದ ಊರಿಗೆ ಹೋದ. ರಜ ಮುಗಿದ ಬಳಿಕ ಹಾಸ್ಟಲ್ಲಿಗೆ ಬಂದು ಸೇರಿದ. ಅವನ ವಿದ್ಯೆ ಮುಂದುವರಿಯುವುದು ಸಾಧ್ಯವಾಗುವುದೊ ಇಲ್ಲವೊ ಎಂದು ಆತಂಕ ಪಡುತ್ತಿದ್ದ ನನಗೆ ಇದರಿಂದ ನೆಮ್ಮದಿ

ಯುಂಟಾಯಿತು. ಹಾಸ್ಟಲ್ಲಿನಲ್ಲಿ ನಾವಿಬ್ಬರೂ ಒಂದೇ ಕೋಣೆಯಲ್ಲಿ ದ್ದೆವು.

ಕೆಲವು ದಿನಗಳು ಕಳೆಯುವುದರೊಳಗೆ ಅವನಲ್ಲಿ ಆಗಿದ್ದ, ಆಗುತ್ತಿದ್ದ ಮಾರ್ಪಾಡುಗಳು ನನ್ನ ಗಮನಕ್ಕೆ ಬಂದವು. ಹಾಸ್ಯ ಪ್ರಿಯ, ವಾಕ್ಚತುರ ಅನಂತ ಗೆಳೆಯರಿಂದ, ಗೆಳೆಯರ ನಗೆವೃತ್ತದಿಂದ ದೂರವಾಗುತ್ತ ಬಂದ. ಮೊದಲು ಅವನು ಓದುತ್ತಿದ್ದ ಪುಸ್ತಕ ಗಳೆಂದರೆ ನಾಟಕದ ಪುಸ್ತಕಗಳು, ಸಂಗಡಿಗರು ಕಣ್ಣು ಮಿಟಕಿಸಿ ಕೈಗೆಕೊಟ್ಟ ಪುಸ್ತಕಗಳು, ಪರೀಕ್ಷೆ ಇನ್ನೊಂದು ತಿಂಗಳಿದೆ ಎನ್ನುವಾಗ ಪಠ್ಯ ಪುಸ್ತಕಗಳು. ಈಗ ಅವನ ಕಾಲ ಬಹುಪಟ್ಟಿಗೆ ಕಾಲೇಜಿನ ವಾಚನಾಲಯದ ಇತಿಹಾಸದ ಭಾಗದಲ್ಲಿ ಕಳೆಯಲ್ಪಡುತ್ತಿತ್ತು. ಮುಖದಲ್ಲಿ ಮೊದಲಿನ ಚಂಚಲ ನಗುವಿನ ಬದಲು ಇತಿಹಾಸದ ವಿದ್ಯಾರ್ಥಿಯ ಕಳೆ ನೆಲಸಿತು. ಗೆಳಯರಿಗೆ ಅವನ ಸಹವಾಸ ಸಿಗು ವುದು ದುರ್ಲಭವಾಯಿತು. ಅನಂತನ ಈ ಹೊಸ ಗಾಂಭೀರ್ಯ ನನ್ನ ಚಿಂತೆಗೆ ಕಾರಣವಾಯಿತು.

ಒಂದು ಸಂಜೆ ಅವನನ್ನು ಬಲವಂತದಿಂದ ಕಾಲೇಜಿನಲ್ಲಿ ನಡೆ ಯುತ್ತಿದ್ದ ಟೆನ್ನಿಸ್ ಪಂದ್ಯಗಳನ್ನು ನೋಡಲು ಕರೆದುಕೊಂಡು ಹೋದೆ. ಉತ್ಸಾಹದಿಂದ ಕೂಗಾಡುತ್ತಿದ್ದ ಹುಡುಗರ ಮಧ್ಯೆ ಅವನ ಖಿನ್ನ ಮುಖವನ್ನು ನೋಡಿ ನನಗೆ ರೇಗಿತು. ಮೊದಲಿನಿಂದಲೂ ಅವನಿಗೆ ಆಟಗಳ ಮೇಲೆ ಬಹಳ ಆಸಕ್ತಿಯೇನಿರಲಿಲ್ಲ. ಈಗಲಂತೂ ಆಟಗಳನ್ನಾಡುವುದು ಕಾಲವ್ಯರ್ಥ ಎನ್ನುವಂತೆ ನಡೆದುಕೊಳ್ಳುತ್ತಿದ್ದ. ಅವನ ಕಡೆಗೆ ತಿರುಗಿ ಏನೋ ಕಟು ಮಾತುಗಳನ್ನಂದೆ. ಅವನ ಕಣ್ಣುಗಳು ಕಿರಿದಾದವು. ನನಗೆ ಉತ್ತರ ಕೊಡಲಿಲ್ಲ. ಬದಲು ನನ್ನ ಕೈ ಹಿಡಿದು ಎದ್ದುನಿಂತ. ಅವನ ಮುಖಚರ್ಯೆಯನ್ನು ಕಂಡು ನನ್ನ ಸಿಟ್ಟು ಕರಗಿ ನಾಚಿಕೆಯಾಯಿತು. ಮಾತನ್ನಾಡದೆ ಅವನೊಡನೆ ನಡೆದೆ.

ಟೆನ್ನಿಸ್ ಕೋರ್ಟ್‌ಗಳಾಚೆ, ಚೆಂಡುಗಳ ಸಪ್ಪಳದಿಂದಾಚೆ, ಹುಡುಗರ ಉತ್ಸುಕಿತ ಕೂಗಿನಾಚೆ ನಡೆದ. ಅವನ ಜೊತೆಗೆ ನಾನು ನಡೆದೆ. ವಾಚನಾಲಯದ ಬಳಿ ಇದ್ದ ಮೈದಾನದಲ್ಲಿ ಒಂದು ಕಡೆ ಕುಳಿತ. ಮಾತನ್ನಾಡತೊಡಗಿದ.

ಅವನಿಗೆ ತಂದೆಯ ಸಾವಿಗಿಂತ ಕ್ರೂರವಾದ ಆಘಾತ, ಅದಕ್ಕಿಂತ ಹೆಚ್ಚಿನ ಸಂಕಟವನ್ನುಂಟು ಮಾಡಿದುದೆಂದರೆ ಅವನ ದೊಡ್ಡಪ್ಪನ ನಡೆವಳಿಕೆ. ಅವನನ್ನು ಊರಿಗೆ ಕರೆಸಿಕೊಂಡು ಬುದ್ಧಿವಾದದ ಮೇಲ್‌ಸೋಗಿನಲ್ಲಿ ನೋವನ್ನುಣಿಸಿದ್ದರು. ಹಣವನ್ನು ಕೂಡಿಹಾಕದಿದ್ದ ತಮ್ಮನನ್ನು ಬಯ್ದರು. ತಮ್ಮನ ಮಗನಿಗೆ ಕಠಿಣವಾಗಿ ಹೇಳಿದರು: ನಿನ್ನ ದೊಡ್ಡಪ್ಪನಾದುದಕ್ಕೆ ನಿನ್ನ ವಿದ್ಯೆಯನ್ನು ನೋಡಿಕೊಳ್ಳೋದು ನನ್ನ ಕರ್ತವ್ಯ. ಅದನ್ನು ಬಿಟ್ಟು ಇನ್ನೇನೂ ನನ್ನಿಂದಾಗದು. ನಾನೂ ಸಂಸಾರಸ್ಥ....ಚೆನ್ನಾಗಿ ಓದೋದು ನಿನ್ನ ಕರ್ತವ್ಯ. ಇನ್ನು ನೀನು ದೊಡ್ಡವನಾದೆ. ನಿನ್ನನ್ನು ನೀನು ನೋಡಿಕೊಳ್ಳಬೇಕು. ಇದು ವರೆಗಿನ ಹಾಗೆ ಇನ್ನೂ ಮುಂದೂ ನಾಟಕ, ನಾಟಕ ಅಂತ ಕುಣೀತಾ ಇದ್ದರೆ ನಡೆಯೋದಿಲ್ಲ; ತಂದೆಯ ಸಾವಿನಿಂದ ಜರ್ಜರಿತವಾಗಿದ್ದ ಹೃದಯ ಕಾಠಿಣ್ಯದ ಸ್ಪರ್ಶದಿಂದ ಕಠಿಣವಾಯಿತು. ಚೆನ್ನಾಗಿ ಓದಬೇಕೆಂಬ ನಿರ್ಧಾರದಿಂದ ಕಾಲೇಜಿಗೆ ಹಿಂತಿರುಗಿದ. ನಿರ್ಧಾರವನ್ನು ಪಾಲಿಸುತ್ತ ಬಂದಿದ್ದ.

ನನ್ನನ್ನಾವರಿಸಿದ್ದ ನಾಚಿಕೆ, ಆಶ್ಚರ್ಯ ದುಃಖಕ್ಕೆ, ಸಂಕಟಕ್ಕೆ ತಿರುಗಿದವು. ಮಾತಿನ ರೂಪದಲ್ಲಿ ಹೊರಗೆಡಹಲಾಗಿದ್ದ ಭಾವನೆಗಳನ್ನು ನನ್ನ ಕೈ ಹುಲ್ಲಿನ ಮೇಲೆ ಅಸಹಾಯಕವಾಗಿ ಆದರೆ ಬಿಗುವಾಗಿ, ಬಿದ್ದಿದ್ದ ಅವನ ಕೈಗೆ ಸೂಚಿಸಿತು. ಸೂಚಿಸಿದ ಭಾವನೆಗಳನ್ನು ಗುರುತಿಸಿದರ ಗುರುತಾಗಿ ಅವನ ಮುಖ ಮೇಲೆದ್ದಿತು.

ಅನಂತ ನಿರ್ಧಾರವನ್ನು ಸ್ವಲ್ಪವೂ ಸಡಿಲಿಸದೆ ಓದಿದ ಉಪಾಧ್ಯಾಯರಿಗೆ ಅಚ್ಚುಮೆಚ್ಚಾದ. ಎರಡನೆಯ ಆನರ್ಸ್ ಪರೀಕ್ಷೆಯಲ್ಲಿ ತರಗತಿಗೆ ಮೊದಲಿಗನಾದ. ವಿದ್ಯಾರ್ಥಿವೇತನವನ್ನು ಪಡೆದ.

ಬೇಸಿಗೆ ರಜಕ್ಕಾಗಿ ಕಾಲೇಜು ಮುಚ್ಚುವ ಮುನ್ನ ವಿವಿಧ ವಿನೋದಾವಳಿಯ ಕಾರ್ಯಕ್ರಮವನ್ನು ಏರ್ಪಡಿಸಬೇಕೆಂದು ವಿದ್ಯಾರ್ಥಿಗಳು ತೀರ್ಮಾನಿಸಿದರು. ಕಾರ್ಯಕ್ರಮದಲ್ಲಿ ನಾಟಕ ಇದ್ದೇ ಇರಬೇಕು. ನಾಟಕದಲ್ಲಿ ಅನಂತನಿಲ್ಲದೆ ಸಾಧ್ಯವೆ? ಅನಂತ ಮೊದಲು ಅನುಮಾನಿಸಿದ. ಕಡೆಗೆ, ವರ್ಷದಿಂದ ರಂಗಸ್ಥಳದ ಮೇಲೆ ಆಡದ ಕಾಲುಗಳು ಅದರತ್ತ ಧಾವಿಸಿದವು. ಗೆಳೆಯರು ನೆಮ್ಮದಿಯಿಂದ ಉಸಿರಾಡಿದರು. ಅನಂತನ ಅಭಿನಯ ನಿರೀಕ್ಷಿಸಿದ್ದಕ್ಕಿಂತ ಅದ್ಭುತವಾಗಿತ್ತು. ತೆರೆಗಳು ಕೈಚಪ್ಪಾಳೆಗಳಿಂದ ನಡುಗುತ್ತಿದ್ದಾಗ ಅನಂತ ಆಶ್ಚರ್ಯಪಟ್ಟ: ಇಷ್ಟು ದಿನ ನಾನು ನಾಟಕ ಆಡದೆ ಹೇಗಿದ್ದೆ?

ಮೂರನೆಯ ದಿನ ಊರಿಗೆ, ದೊಡ್ಡಪ್ಪನ ಮನೆಗೆ ಪ್ರಮಾಣ ಬೆಳೆಸಿದ.

ರಜೆ ಮುಗಿಸಿಕೊಂಡು ಹಾಸ್ಟಲ್ಲಿಗೆ ಬಂದ ಹುಡುಗರಲ್ಲಿ ಅನಂತನೇ ಮೊದಲಿಗ. ಕೆಲವು ದಿನಗಳ ನಂತರ ಬಂದ ನನಗೆ ಅವನನ್ನು ನೋಡಿ ಗಾಬರಿಯಾಯಿತು. ತೆಳು ಮೈ ಸೊರಗಿತ್ತು. ಮುಖದ ಮೇಲಿನ ಗಂಭೀರತೆಗೆ ಭೀಷಣವಾದ ಖಿನ್ನತೆ ಬಂದು ಸೇರಿತ್ತು. ಮೊದಲು ವಾಚನಾಲಯದಲ್ಲೇ ಬಹುಕಾಲವನ್ನು ಕಳೆಯುತ್ತಿದ್ದವನು ಈಗ ಅವರ ಬಳಿ ಕೂಡ ಸುಳಿಯದಾದ ತರಗತಿಗಳಿಗೂ ಕ್ರಮವಾಗಿ ಹೋಗದಾದ. ಎರಡನೆಯ ವರ್ಷದಲ್ಲಿ ವ್ಯಾಸಂಗ ನಿರತನಾಗಿದ್ದವನು ಮೂರನೆಯ ವರ್ಷದಲ್ಲಿ ಪೂರ್ಣ ಉದಾಸೀನನಾದುದನ್ನು ನೋಡಿ ನನಗೆ ಆಶ್ಚರ್ಯವಾಯಿತು, ಯೋಚನೆಯಾಯಿತು. ಅವನನ್ನು ಪ್ರಶ್ನಿಸಬೇಕೆಂದುಕೊಂಡೆ. ಮಾತೆಂದರೆ ಮರವಾಗುತ್ತಿದ್ದ ನನ್ನ ನಾಲಿಗೆ ಸಹಕರಿಸದಾಯಿತು. ಅನಂತನ ವರ್ತನೆ ದಿನದಿನಕ್ಕೆ ವಿಚಿತ್ರವಾಗುತ್ತ ಬಂದಿತು. ಗೆಳೆಯರ ಸಹವಾಸವನ್ನು ಸಂಪೂರ್ಣವಾಗಿ ತ್ಯಜಿಸಿದ, ಮೌನ, ಏಕಾಂತಗಳನ್ನಾಲಂಗಿಸಿದ.

ಮತ್ತೆ ವಾಚನಾಲಯದಲ್ಲಿ ವಾಸಿಸತೊಡಗಿದ. ಆದರೆ ಇತಿಹಾಸದ ವಿಭಾಗದ ಕಡೆಗೆ ಕಣ್ಣು ಕೂಡ ಹಾಕಲಿಲ್ಲ.

ಒಂದು ದಿನ ತರಗತಿಯಲ್ಲಿ ಉಪಾಧ್ಯಾಯರು ಅವನ ಉಪೇಕ್ಷೆಯ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದರಂತೆ. ಅಂದು ಅನಂತ ತರಗತಿಗೆ ಹೋಗಿರಲಿಲ್ಲ. ನನ್ನ ಒಬ್ಬ ಸ್ನೇಹಿತನಿಂದ ಈ ವಿಷಯ ತಿಳಿದು ಬಂತು. ಆತಂಕ ಮರದ ನಾಲಿಗೆಗೆ ಬೆಂಕಿ ಸೋಕಿಸಿತು. ಅಂದು ಸಂಜೆ ವಾಚನಾಲಯದ ಬಳಿ ಭೇಟಿಯಾದ ಅನಂತನನ್ನು ನನ್ನೊಡನೆ ತಿರುಗಾಡಲು ಬಾರೆಂದು ಕರೆದೆ. ದಾರಿಯಲ್ಲಿ ಅವನ ಉಪಾಧ್ಯಾಯರ ಟೀಕೆಯ ವಿಷಯವನ್ನು ಹೇಳಿದೆ. ಅವನ ಮುಖ ಸಡಿಲವಾಗಲಿಲ್ಲ. ಕಡೆಗೆ ತಡೆಯಲಾರದೆ ಕೇಳಿದೆ: 'ಅನಂತ ಹೀಗೇಕೆ ಈಚಿಗೆ? ನನ್ನ ಕಡೆಗೆ ತಿರುಗಿದ ಅವನ ಹುಬ್ಬುಗಳು ಒಟ್ಟುಗೂಡಿದವು. ಹಿಂದೆ ತಿರುಗುತ್ತ ಅಂದ: 'ಬಾ, ಹೋಗೋಣ.'

ಮತ್ತೆ ಹುಲ್ಲಿನ ಮೇಲೆ ಕುಳಿತೆವು. ಮತ್ತೆ ಅನಂತ ಮಾತನ್ನಾಡ ತೊಡಗಿದ. ನನಗೆ ದಿಗ್ಭ್ರಮೆ ಹಿಡಿಸಿದ.

ಹೋದ ಬಾರಿ ದೊಡ್ಡಪ್ಪನ ಮನೆಗೆ ಹೋಗಿದ್ದಾಗ ಅನಂತ ಆಘಾತದ, ಆತಂಕದ ಭಾರವಾದ ವಿಚಾರ ಶೂನ್ಯನಾಗಿದ್ದ. ಈ ಬಾರಿ ಹೋಗುವ ಹೊತ್ತಿಗೆ ವರ್ಷದ ಕಾಲ ಮತ್ತು ವಿದ್ಯಾಭ್ಯಾಸದಲ್ಲಿ ತೃಪ್ತಿಕರ ಪ್ರಗತಿ ಇವುಗಳಿಂದ ಮನಸ್ಸು ಸ್ವಲ್ಪ ಹಗುರವಾಗಿತ್ತು. ಕಣ್ಣೀರನ್ನು ಕೊಡವಿ ಒಣಗಿದ ಕಣ್ಣು ದೊಡ್ಡಪ್ಪನ ಮನೆಯನ್ನು ಪರಿಶೀಲಿಸಿತು. ಮನಸ್ಸು ಆಶ್ಚರ್ಯಪಟ್ಟಿತು. ಅಸಹ್ಯಪಟ್ಟಿತು. ಮತ್ತೆ ಭಾರವಾಯಿತು.

ದೊಡ್ಡಪ್ಪನಿಗೆ ದೊಡ್ಡ ಸರಕಾರಿ ಕೆಲಸವಿತ್ತು. ಪದವಿಗೆ ತಕ್ಕಂತೆ ದೊಡ್ಡ ಮನೆ, ಕಾರು, ಆಳು ಕಾಳು; ದೊಡ್ಡ ಕೆಲಸಗಳುಳ್ಳ ಸ್ನೇಹಿತರ ತಂಡ. ಆತನ ಹೆಂಡತಿ ಹಳ್ಳಿಯವಳಾದರೂ ಪಟ್ಟಣಕ್ಕೆ ಬಂದು ನವನಾಗರಿಕಳಾಗಿದ್ದಳು. ಅನೇಕ ಸಂಸ್ಥೆಗಳ ಸದಸ್ಯೆಯಾಗಿ

ದ್ದಳು; ಕೆಲವುವರ ಕಾರ್ಯಕಾರಿ ಮಂಡಲಿಯಲ್ಲಿದ್ದಳು. ಬಿಡುವಾದಾಗ ಬಿಳಿ ನೂಲಿನ ಸೀರೆಯುಟ್ಟು (ಅದೊಂದೇ ಬಾರಿ ಅವಳು ನೂಲಿನ ಸೀರೆ ಉಡುತ್ತಿದ್ದದ್ದು), ಬಿಳಿ ಕ್ಯಾನ್ವಾಸ್ ಷೂ ಹಾಕಿಕೊಂಡು ಕ್ಲಬ್ಬಿನಲ್ಲಿ ಟೆನ್ನಿಸ್ ಆಡುತ್ತಿದ್ದಳು. ಸತ್ಕಾರ ಕೂಟಗಳನ್ನು ಏರ್ಪಡಿಸುವುದರಲ್ಲಿ ನಿಸ್ಸೀಮಳು ಎಂದು ಹೆಸರನ್ನು ಪಡೆದಿದ್ದಳು. ಮನೆಯಲ್ಲಿ ಒಂದು ದಿನ ಯಾವುದೊ ಆಮಂತ್ರಣ ಪತ್ರಿಕೆಗೆ ಉತ್ತರವಾಗಿ ಕಾಗದ ಬರೆಯುತ್ತಿದ್ದಾಗ ಒಬ್ಬ ಬಡ ಹುಡುಗ ಮುಂದಿನ ವಿದ್ಯಾರ್ಜನೆಗಾಗಿ ಹಣವನ್ನು ಬೇಡಿದ. ಸಿಡುಕಿದಳು: 'ಒಬ್ಬನನ್ನು ಓದಿಸುತ್ತಿರುವುದೇ ಸಾಕಾಗಿದೆ ನಮಗೆ.'

ದೊಡ್ಡಪ್ಪನಿಗೆ ಎರಡೇ ಮಕ್ಕಳು. ಇಬ್ಬರೂ ಅನಂತನಿಗಿಂತ ಸ್ವಲ್ಪ ದೊಡ್ಡವರು. ಮಗ—ಊರಲ್ಲೆಲ್ಲ ಅವನ ಮೋಟರ್ ಸೈಕಲ್ಲಿನ ಗಡಸು ಧ್ವನಿ ತುಂಬಿರುತ್ತಿತ್ತು. ತನಗೆ ತಂದೆ ಕಾರನ್ನು ಉಪಯೋಗಿಸಲು ಕೊಡುವುದಿಲ್ಲವೆಂದು ಅವನ ದೂರು. ವಿದ್ಯೆಯ ಮೇಲೆ ಅಷ್ಟೇನೂ ಆಸಕ್ತಿ ಇರಲಿಲ್ಲ. ಪದವೀಧರನಾದ ಕೂಡಲೆ ತಂದೆ ತನಗೊಂದು ಕೆಲಸವನ್ನು ಕೊಡಿಸುವರೆಂದು ಗೊತ್ತಿದ್ದರಿಂದ ಜೀವನೋಪಾಯದ ಬಗೆಗೆ ಯೋಚನೆ ಇರಲಿಲ್ಲ. ಮಗಳು—ಅಸಾಧಾರಣ ಪ್ರತಿಭಾವಂತೆಯಲ್ಲದಿದ್ದರೂ ಬುದ್ಧಿವಂತೆ. ಸ್ನೇಹಿತರ ಜೊತೆ ಸಾಹಿತ್ಯ, ಸಂಗೀತ, ಚಿತ್ರಕಲೆಗಳ ಬಗ್ಗೆ ಧಾರಾಳವಾಗಿ ಮಾತನ್ನಾಡುತ್ತಿದ್ದಳು. ಆದರೆ ತನಗಿಂತ ಅಜ್ಞಾನಿಗಳಾದವರನ್ನು ಮಾತ್ರ ಸ್ನೇಹಿತರನ್ನಾಗಿ ಆರಿಸುತಿದ್ದಳು. ತನಗಿಂತ ಹೆಚ್ಚು ತಿಳಿವಳಿಕೆಯನ್ನು ಹೊಂದಿದವರನ್ನು ಗರ್ವಿಷ್ಠರು ಎಂದು ಆರೋಪಿಸುತ್ತಿದ್ದಳು. ಅಣ್ಣ, ತಂಗಿ ಇಬ್ಬರಿಗೂ ಸಿನಿಮಾದ ಹುಚ್ಚು ಬಹಳ. ಸಿನಿಮಾದ ಪ್ರಭಾವ ಅವರ ಮತ್ತು ಅವರ ಸ್ನೇಹಿತರ ಮಾತು, ಉಡುಪು, ನಡೆವಳಿಕೆ, ಯೋಚನೆ ಇವುಗಳಲ್ಲಿ ಕಂಡು ಬರುತ್ತಿತ್ತು. ಎಲ್ಲರೂ ಫ್ಯಾಷನ್ನಿನ ದೃಢ ಅನುಯಾಯಿಗಳಾದ್ದರಿಂದ ಎಲ್ಲರೂ ಒಂದೇ ಮಾದರಿಯಲ್ಲಿ ರೂಪಿತರಾಗಿದ್ದರು.

ಹತ್ತು ಸೀಸೆಗಳಲ್ಲಿದಿದ್ದ ಕುಂಚದಿಂದ ಚಿತ್ರಿಸಲ್ಪಟ್ಟ ಮುಖಗಳು, ಐದು ಫ್ಯಾಷನ್ ಪತ್ರಿಕೆಗಳು ವಿಧಿಸಿದ ಉಡಿಗೆತೊಡಿಗೆಗಳು, ಎರಡು ಪತ್ರಿಕೆಗಳು ಘೋಷಿಸಿದ ಅಭಿಪ್ರಾಯಗಳು, ಒಬ್ಬ ಸಿನೆಮಾ ನಟ ಅಥವಾ ನಟಿ ಪ್ರದರ್ಶಿಸಿದ ಭಂಗಿಗಳು. ಅಣ್ಣ, ತಂಗಿ ಇಬ್ಬರೂ ಸ್ನೇಹಿತರ ಆರಾಧನೆಗೆ ಪಾತ್ರರಾಗಿದ್ದರು, ತಂದೆ ತಾಯಿಗಳ ಹೆಮ್ಮೆಗೆ ಕಾರಣರಾಗಿದ್ದರು.

ದೊಡ್ಡಪ್ಪನಿಗೆ ವಿರಾಮವೇ ಸಿಕ್ಕುತ್ತಿರಲಿಲ್ಲ. ಕೆಲಸ, ಕ್ಲಬ್ಬುಗಳು, ಸ್ನೇಹಿತರು, ಸಂತೋಷ ಕೂಟಗಳು—ಇವುಗಳ ಗಲಾಟೆಯಲ್ಲಿ ಅವನು ಮನೆಯಲ್ಲಿ ಇರುತ್ತಿದ್ದದು ಬಹಳ ಕಡಿಮೆ ಹೊತ್ತು. ಮನೆಯಲ್ಲಿದ್ದಾಗ ದಿವಾನಖಾನೆಯಲ್ಲಿ ಕುಳಿತು ಅವರ ಅಂದಚಂದಗಳನ್ನು ನೋಡಿ ತೃಪ್ತಿಪಡುತ್ತಿದ್ದ. ಬಣ್ಣದ ಪರದೆಗಳು, ಜಮುಖಾನೆ, ಮಿರುಗುತ್ತಿದ್ದ ಮೇಜು, ಕುರ್ಜಿಗಳು, ರೇಡಿಯೋ, ಅತಿವಾಸ್ತವವಾದಿಯೊಬ್ಬ ತಯಾರು ಮಾಡಿದಂತೆ ಕಾಣುತ್ತಿದ್ದ ಕಾಗದದ ಹೂಗೊಂಚಲುಗಳು (ಅಷ್ಟು ದೊಡ್ಡ ಪಟ್ಟಣದಲ್ಲಿ ನಿಜವಾದ ಹೂಗಳೆಲ್ಲಿ ಸಿಗಬೇಕು?) ಯಂತ್ರದಿಂದ ತಯಾರಿಸಲ್ಪಟ್ಟ, ಮಣ್ಣಿನ, ಸಣ್ಣ, ಬಣ್ಣದ ಪ್ರತಿಮೆಗಳು. ಇವುಗಳನ್ನು ಕೋಣೆಯಲ್ಲಿ ವ್ಯವಸ್ಥಿತವಾಗಿ ಕೂಡಿಟ್ಟ ಹೆಂಡತಿಯ ಬಗ್ಗೆ ಹೆಮ್ಮೆಪಡುತ್ತಿದ್ದ. ಕೈತುಂಬ ಸಂಬಳ ಬರುತ್ತಿತ್ತು. ಬರುವುದು ಸಾಲದು ಎಂದು ಮರೆಯವರೆಲ್ಲರೂ ಗೊಣಗುತ್ತಿದ್ದರು. ಆಯಕ್ಕೆ ತಕ್ಕಂತೆ ವ್ಯಯ ಇದ್ದೇ ಇರುತ್ತದೆ. ಅಂತಸ್ತನ್ನು ಕಾಪಾಡಿಕೊಳ್ಳಲು ಹಣವನ್ನು ಹೇರಳವಾಗಿ ಖರ್ಚು ಮಾಡಬೇಕು. ('ನಾಬ್ಲೆಸ್' ಆಬ್ಲಿಜ್, ಎಂದ ಅನಂತ; ತುಟಿಯ ಒಂದು ತುದಿ ಸೊಟ್ಟಗಾಗಿತ್ತು.)

ದೊಡ್ಡಪ್ಪನ ಮನೆಯನ್ನು, ಮನೆಯವರನ್ನು ನೋಡಿ ಅನಂತ ಹೌಹಾರಿದ್ದ. ನಾಗರಿಕತೆಯ ಬಣ್ಣದ ಬಲೆಯಲ್ಲಿ ಬಿದ್ದು, ಮೈಗೆ ಅಂಟಿಕೊಂಡು ಚರ್ಮವನ್ನು ತಿನ್ನುವ ಬಣ್ಣವನ್ನು ಕಾಮನ

ಬಿಲ್ಲು ಎಂದು ಅವರೆಲ್ಲರೂ ನಂಬಿದ್ದರು. ತಮ್ಮ ಸುತ್ತ ಇರುವುದು ಸ್ವರ್ಗದಲ್ಲಿ ಎಂದು ಗುಣಿಸಿ ತೃಪ್ತಿಯಿಂದಿದ್ದರು. ಒಂದು ಮನೆಯಲ್ಲಿ ಇಷ್ಟು ಜನ ಇಂತಹವರು ಒಂದು ಪಟ್ಟಣದಲ್ಲಿ? ಒಂದು ದೇಶದಲ್ಲಿ? ಪ್ರಪಂಚದಲ್ಲಿ? ಯೋಚನೆಯಿಂದ ಅನಂತನ ತಲೆ ನಡುಗಿತ್ತು, ನೊಂದಿತ್ತು. ಜನ ಸ್ವಾರ್ಥತೆಯ ಲೋಹ-ವಸ್ತ್ರಗಳನ್ನು ಧರಿಸಿ, ಒಬ್ಬರ ಮೇಲೊಬ್ಬರು ಸಂಶಯಪಟ್ಟು, ಒಬ್ಬರಿಂದೊಬ್ಬರು ದೂರ ವಿರುವುದನ್ನು ನೋಡಿದ. ಐಶ್ವಯ, ಅಧಿಕಾರಿಗಳ ಆರಾಧನೆಗಾಗಿ ಸಾಲಿನಲ್ಲಿ ನಿಂತ ತಂಡಗಳನ್ನು ನೋಡಿದ. ಜೀವನದಿಯನ್ನು ಕೃತ್ರಿಮತೆಯ ಕಬ್ಬಿಣದ ದೋಣಿಗಳಲ್ಲಿ ದಾಟಲೆತ್ನಿಸಿ ಮುಳುಗುತ್ತಿದ್ದ ಗುಂಪುಗಳನ್ನು ನೋಡಿದ. ಸಂಗಡಿಗರ ಸ್ನೇಹದ ಧ್ವನಿ, ಮತ್ತು ಒತ್ತಾಯದಿಂದ ಕರೆಯುವ ನಾಟಕದ ಹಾಡುಗಳು, ಮಾತುಗಳು ತನಗೆ ಕೇಳಿಸದಿರಲೆಂದು ಕಿವಿಗಳಿಗೆ ಹತ್ತಿಯನ್ನು ತುರುಕಿ, ಶತಮಾನಗಳಷ್ಟೇ ದಪ್ಪನಾದ ಧೂಳಿನ ಹೊದಿಕೆಯನ್ನು ಹೊಂದಿದ ಇತಿಹಾಸದ ದಪ್ಪ ಪುಸ್ತಕಗಳ ಮಧ್ಯೆ ತಲೆಯಿಟ್ಟು ಕುಳಿತಿದ್ದ ತನ್ನ ಬಗೆಗೆ ತನಗೇ ತಿರಸ್ಕಾರ ಹುಟ್ಟಿತು. ರಾಜ, ರಾಣಿ, ಮಂತ್ರಿ, ಸೇನಾಪತಿಗಳ ನೆರಳುಗಳ ನಡುವಿನಲ್ಲಿ ನಿಶ್ಚಲನಾಗಿ ಕುಳಿತಿದ್ದುದು ದೊಡ್ಡಪ್ಪನ ಚುಚ್ಚು ಮಾತುಗಳಿಂದಾಗಿ, ದೊಡ್ಡಪ್ಪ ಹೇಳಿದಂತೆ ಕೇಳಿ, ಚೆನ್ನಾಗಿ ಓದಿ, ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದರೆ, ಒಳ್ಳೆಯ ಕೆಲಸ ಸಿಕ್ಕುತ್ತದೆ. ಒಳ್ಳೆಯ ಕೆಲಸ, ಒಳ್ಳೆಯ ಸಂಬಳ; ಮನೆ, ಸಂಸಾರ ಸ್ನೇಹಿತರು, ಸಂಘಗಳು. ಒಂದು ಸಣ್ಣ ಪ್ರಪಂಚದಲ್ಲಿ ಬೆಚ್ಚಗಿರಬಹುದು. ಮಿಕ್ಕವರ ಪ್ರಪಂಚಗಳಲ್ಲಿನ ಕೃತ್ರಿಮತೆಯನ್ನು ತನ್ನದರಲ್ಲೂ ತುಂಬಿಕೊಂಡು, ಅವರೊಡನೆ, ಅವರಂತೆ ತೃಪ್ತಿಯಿಂದರಬಹುದು. ಸಂಸಾರದ ಸಣ್ಣ ವೃತ್ತ, ಅದರೊಳಗೆ ಅದರ ವಾಸಿಗಳ ಅನೇಕ ವೃತ್ತಗಳು: ಒಂದನ್ನೊಂದು ಸೋಕುವಂತೆ, ಒಂದನ್ನೊಂದು ಕೂಡದಂತೆ ಇರಬಹುದು.

ಅನಂತನ ಎದೆ ಸಿಡಿದಿತ್ತು. ಸ್ವಾತಂತ್ರ್ಯ ಎಂದು ತೋರುತ್ತಿದ್ದ ದಾಸ್ಯದಿಂದ, ಸಂಸ್ಕೃತಿ ಎಂದು ಹೆಸರಿಡಲ್ಪಟ್ಟ ಕುರೂಪದಿಂದ,

ಕ್ರೌರ್ಯದಿಂದ ವಿಮೋಚನೆಗಾಗಿ ಹಾತೊರೆದ. ಕೃತ್ರಿಮತೆಯ ಕಾಠಿಣ್ಯ ದಿಂದ ಗಾಯಗೊಂಡ ಮನಸ್ಸು ಸರಳ, ಶುಭ್ರ, ಸ್ನೇಹಮಯ ಜೀವನಕ್ಕಾಗಿ ಹೊತೊರೆಯಿತು. ಹಾಸ್ಟೆಲ್ ತೆಗೆಯುವುದನ್ನೇ ಕಾದಿದ್ದ ಅನಂತ ದೊಡ್ಡ ಪಟ್ಟಣದಿಂದ ಓಡಿ ಬಂದಿದ್ದ.

ಅವನು ಹುಡುಕುತಿದ್ದ ಉತ್ತರ ಕಾಲೇಜಿನಲ್ಲಿ, ತರಗತಿಗಳಲ್ಲಿ, ಉಪಾಧ್ಯಾಯರಲ್ಲಿ ಸ್ನೇಹಿತರಲ್ಲಿ ಸಿಕ್ಕಲಿಲ್ಲ. ಹೊಸದಾಗಿ ಹುಟ್ಟಿದ್ದ ಸೂಕ್ಷ್ಮ ದೃಷ್ಟಿ ಅವನ ಚಿತ್ತಸ್ವಾಸ್ಥ್ಯವನ್ನು ಕೊಂದಿತು. ಆಟದಲ್ಲಿ, ಪಾಠದಲ್ಲಿ, ಮನೋರಂಜನೆಯಲ್ಲಿ, ಶೃಂಗಾರದಲ್ಲಿ ತಲ್ಲೀನರಾಗಿದ್ದ ವಿದ್ಯಾರ್ಥಿಗಳು; ಪಾಠದಲ್ಲಿ, ಕಾಲೇಜಿನ ರಾಜಕೀಯದಲ್ಲಿ, ಸಂಸಾರದ ಸಂಕಟಗಳಲ್ಲಿ ಮುಳುಗಿದ್ದ ಉಪಾಧ್ಯಾಯರು. ಇವರ ಸಂಕುಚಿತ ಜೀವನಗಳನ್ನು ನೋಡಿದ ದೃಷ್ಟಿ ಮಸುಕಾಯಿತು. ವಿಚಾರ ಶೂನ್ಯರಾಗಿ ಆತ್ಮ ವಿಕಾಸಕ್ಕೆ ಲಕ್ಷ್ಯಕೊಡದೆ, ಪರಹಿತವನ್ನೆಣಿಸದೆ, ತಮ್ಮಷ್ಟೇ ವಿಚಾರ ಶೂನ್ಯರು ತೋರಿಸಿಕೊಟ್ಟ ದಾರಿಯಲ್ಲಿ ಓಡುತ್ತಿದ್ದ ಜನರನ್ನು ನೋಡಿದ ದೃಷ್ಟಿ ಹಟದಿಂದ ಮತ್ತೆ ಸ್ಪಷ್ಟವಾಯಿತು.

ಅನಂತ ತರಗತಿಯ ಪಾಠಗಳನ್ನು ನಿರ್ಲಕ್ಷಿಸಿದ. ತನ್ನ ಪ್ರಶ್ನೆಗೆ ಉತ್ತರವನ್ನು ಪುಸ್ತಕಗಳಲ್ಲಿ ಹುಡುಕತೊಡಗಿದ. ಪ್ರಾಚೀನ ಮತ್ತು ಆಧುನಿಕ ತತ್ವಜ್ಞಾನಿಗಳ ಮತ್ತು ಸಮಾಜ ಶಾಸ್ತ್ರಜ್ಞರ ಅಭಿಪ್ರಾಯಗಳನ್ನು ಪರಿಶೀಲಿಸಿದ. ಎರಡು ಕಾಲುಗಳಲ್ಲಿನ ವಿಚಾರ—ಶೀಲರ ಅಭಿಪ್ರಾಯಗಳಲ್ಲಿನ ಹೋಲಿಕೆಯನ್ನು ಕಂಡುಕೊಂಡ. ಶತಮಾನಗಳ ಅಂತರದಿಂದ ಪ್ಲೇಟೋವಿನ ಆದರ್ಶಗಳನ್ನು ಪರೀಕ್ಷಿಸಿದ; ಮಾರ್ಕ್ಸ್‌ನ ತತ್ವಗಳೊಡನೆ ಹೋಲಿಸಿ ನೋಡಿದ. ಆದರ್ಶ ಸಮಾಜದ ಕನಸನ್ನು ಕಂಡವರೆಲ್ಲರ ನೆರವು ಪಡೆದ. ರೂಸೋ, ಬ್ರಿಡ್ಜಸ್, ರಸೆಲ್, ಗಾಂಧಿ....ದೇಶ, ವಿದೇಶಗಳ ಜಿಜ್ಞಾಸುಗಳು ನುಡಿಯುತ್ತ ಬಂದರು. ಅವರ ಮಾತುಗಳನ್ನು ಕುರಿತು ಚಿಂತಿಸಿದಾಗ ಅನೇಕ ಯೋಜನೆಗಳು ಹೊಳೆಯುತ್ತಿದ್ದವು. ಮನಸ್ಸಿನಲ್ಲಿ ಉತ್ಸಾಹ, ಸಮಾಧಾನಗಳು

ಮೂಡುತ್ತಿದ್ದವು. ಆದರೆ ವಾಚನಾಲಯದಿಂದ ಹೊರಗೆ ಬಂದು ಜಗತ್ತನ್ನು ಎದುರಿಸಿದಾಗ ಉತ್ಸಾಹ ಕುಸಿದು ಬೀಳುತ್ತಿತ್ತು, ಸಮಾಧಾನ ಕಣ್ಮರೆಯಾಗುತ್ತಿತ್ತು. ಪ್ರಬಲ, ಜೀವಂತ ಜಗತ್ತಿಗೆ ತೊಡಿಸಲು ತನ್ನ ಯೋಜನೆಗಳು ಅಸಮರ್ಥವಾದವು ಎಂದು ಅರಿವಾಗುತ್ತಿತ್ತು. ನಿರಾಶೆ ಅವನನ್ನಾವರಿಸುತ್ತಿತ್ತು. ಸ್ವಲ್ಪ ಹೊತ್ತಿಗೇ ಕಪ್ಪು ಮುಸುಕು ಬಿರಿಯುತ್ತಿತ್ತು, ಹೊನ್ನು ಹೊರಚೆಲ್ಲುತ್ತಿತ್ತು.

ಅನಂತನ ಮುಖದಲ್ಲಿ ಒಂದು ಕ್ಷಣ ಗೀರು ತುಂಬಿದ ಬೂದು ಬಣ್ಣ, ಮತ್ತೊಂದು ಕ್ಷಣ ಗೀರುಗಳಿಗೂ ಎಡೆಕೊಡದ ಕಪ್ಪು ಬಣ್ಣ. ಅವನ ಅನ್ವೇಷಣೆಯಲ್ಲಿ, ಸಂಕಟದಲ್ಲಿ, ಹೋರಾಟದಲ್ಲಿ ಪಾಲುಗಾರನಾಗಲಾಗದೆ ನನ್ನ ಆತಂಕ ಇಮ್ಮಡಿಸುತ್ತಿತ್ತು. ಇದರ ಅಂತ್ಯವೇನು ಎಂದು ಒಮ್ಮೊಮ್ಮೆ ಯೋಚಿಸುತ್ತಿದ್ದೆ. ತೋರಿ ಬಂದ ಉತ್ತರದ ಭೀಕರತೆಗೆ ಹೆದರಿ ಯೋಚಿಸುವುದನ್ನು ನಿಲ್ಲಿಸುತ್ತಿದ್ದೆ.

ಒಂದು ದಿನ ಊರಿನಲ್ಲಿ ಪ್ರದರ್ಶಿತವಾಗುತ್ತಿದ್ದ ಪ್ರಸಿದ್ಧ ಕಂಪನಿಯೊಂದರ ನಾಟಕವನ್ನು ನೋಡಲು ಹೋದೆವು. ಆ ಊರಿನಲ್ಲಿ ಅದು ಕಂಪನಿಯ ಕಡೆಯ ನಾಟಕವಾಗಿದ್ದಿತು. ಕಿಕ್ಕಿರಿದಿದ್ದ ಜನ ನಾಟಕದ ಬಗೆಗೆ ತಮ್ಮ ಮೆಚ್ಚಿಕೆಯನ್ನು ಉತ್ಸಾಹದಿಂದ ವ್ಯಕ್ತಪಡಿಸಿದರು. ಹಾಸ್ಟಲ್ಲಿಗೆ ಹಿಂದುರುಗುತ್ತಿದ್ದಾಗ ಅನಂತ ಸುತ್ತಲಿನ ಕತ್ತಲೆಯಷ್ಟೇ ಮೌನವಾಗಿದ್ದ. ಆದರೆ ಅವನ ಕಣ್ಣುಗಳು ನಮ್ಮನ್ನು ನಿರ್ದಯದಿಂದ ನೋಡುತ್ತಿದ್ದ ನಕ್ಷತ್ರಗಳಷ್ಟೆ ಹೊಳೆಯುತ್ತಿದ್ದವು.

ಮಾರನೆಯ ದಿನ ಕಾಲೇಜಿನಲ್ಲಿ ದೊಡ್ಡ ಕೋಲಾಹಲ. ಅನಂತ ಪ್ರಿನ್ಸಿಪಾಲರಿಗೆ ಒಂದು ಕಾಗದವನ್ನು ಬರೆದಿಟ್ಟು ಎಲ್ಲಿಯೋ ಹೊರಟು ಹೋಗಿದ್ದ. ತನಗೆ ಓದಿನಲ್ಲಿ ಏನೇನೂ ಆಸಕ್ತಿಯಿಲ್ಲವಾಗಿದ್ದರಿಂದ ಕಾಲೇಜನ್ನು ಬಿಟ್ಟು ಹೋಗುತ್ತಿದ್ದೇನೆಂದು ಬರೆದಿದ್ದನಂತೆ. ಎಲ್ಲರಿಗೂ ಇದೊಂದು ಆಶ್ಚರ್ಯಕರ ಸಂಗತಿ ಎನಿಸಿತು: ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿ ಹೀಗೇನಾದರೂ ಮಾಡಿದ್ದರೆ ಒಪ್ಪಬಹುದಾಗಿತ್ತು; ಆದರೆ

ಇತಿಹಾಸದ ವಿದ್ಯಾರ್ಥಿ! ಅವನ ನಿರ್ಗಮನಕ್ಕೆ ನಿಜವಾದ ಕಾರಣ ಗಳನ್ನು ಸಹಪಾಠಿಗಳು ಊಹಿಸಲು ತೊಡಗಿದರು. ಅವರು ಕಟ್ಟಿದ ನೀಚ ಕತೆಗಳನ್ನು ಖಂಡಿಸುತ್ತ ಬಂದೆ. ವಾಸ್ತವ ಸಂಗತಿ ಗೊತ್ತಿದ್ದದು ನನಗೊಬ್ಬನಿಗೇ. ನಾಟಕದ ಕಂಪೆನಿಗೆ ಸೇರಿ, ಮನಃಪೂರ್ತಿ ಅಭಿ ನಯಿಸುವ ಆಶೆಯಿಂದ, ಪ್ರಪಂಚವನ್ನು ನೋಡುವ ಹಂಬಲದಿಂದ ಅನಂತ ಹೋಗಿದ್ದ. ಪರ್ಯಟನದಿಂದ ತನ್ನ ಮನಸ್ಸಿಗೆ ಸಮಾಧಾನ ದೊರಕುತ್ತದೆ ಎಂದು ಅವನು ನಂಬಿದ್ದ.

ವರ್ಷಗಳು ಕಳೆದವು. ಅನಂತನ ವಿಷಯವಾಗಿ ಏನೂ ತಿಳಿದು ಬಂದಿರಲಿಲ್ಲ. ಪದವೀಧರನಾಗಿ ನಾನು ಕಾಲೇಜಿನಿಂದ ಹೊರಬಿದ್ದೆ. ಕೆಲಸ ಮಾಡತೊಡಗಿದೆ. ಮದುವೆಯಾಯಿತು, ಮಕ್ಕಳಾದವು.

ಕಡೆಗೊಂದು ದಿನ ಅನಂತನ ಭೇಟಿಯಾಯಿತು. ನಾನಿದ್ದ ಊರಿಗೆ ಆಗ ತಾನೆ ಬಂದಿದ್ದ ನಾಟಕದ ಕಂಪನಿಯ ವಿಷಯವಾಗಿ ಪತ್ರಿಕೆಗಳಲ್ಲಿ ಬಂದಿದ್ದ ವರದಿಗಳು, ವಿಮರ್ಶೆಗಳು ಇವುಗಳನ್ನು ನೋಡಿದಾಗಲೇ ನನಗೆ ಸಂಶಯವಾಗಿತ್ತು. ರಾತ್ರಿ ನಾಟಕಕ್ಕೆ ನಾನೊ ಬ್ಬನೇ ಹೋದೆ. ಪ್ರಮುಖ ನಟನನ್ನು ನೋಡಿದ ಕೂಡಲೆ ಅವನು ಅನಂತ ಎಂದು ಗೊತ್ತಾಯಿತು. ನಾಟಕ ಮುಗಿದ ಮೇಲೆ ಅವನನ್ನು ನೋಡಲು ಹೋದೆ. ಅನಂತನ ಹೆಸರು ಬದಲಾಯಿಸಿತ್ತು. ನನಗೆ ನೆನಪಿದ್ದ ಮುಖದಿಂದ ಈಗ ಕಂಡ ಮುಖ ಬಹುಮಟ್ಟಿಗೆ ಬೇರೆ ಯಾಗಿತ್ತು. ವಯಸ್ಸಾಗಿದ್ದರೂ ಮೊದಲಿಗಿಂತ ಸುಂದರವಾಗಿತ್ತು. ಬೂದು, ಕಪ್ಪುಗಳ ಹೆಸರಿರಲಿಲ್ಲ. ಅಭಿನಯದಿಂದ ಆಯಾಸವಾಗಿ ದ್ದರೂ ಮುಖ ಕಂದಿರಲಿಲ್ಲ. ಅವನ ಮೊದಲಿನ ಬೇಸರದ, ಬಾಡಿದ ಮುಖಕ್ಕೂ, ಈಗಿನ ಉತ್ಸುಕಿತ, ಸಂತುಷ್ಟ ಮುಖಕ್ಕೂ ಹೋಲಿಸಿ ತೃಪ್ತಿಪಟ್ಟೆ. ಹೊಳೆಯುತ್ತಿದ್ದ ಕಣ್ಣುಗಳಲ್ಲಿ ನೆಲೆಸಿದ್ದ ಸಮಾಧಾನ ವನ್ನು ನೋಡಿ ಮನಸ್ಸು ನೆಮ್ಮದಿ ಹೊಂದಿತು. ನನ್ನನ್ನು ಸಂತೋಷ ದಿಂದ ಸ್ವಾಗತಿಸಿದ ಅನಂತ ತನ್ನ ಜೀವನದ, ಕೆಲಸದ ಬಗ್ಗೆ ಹೇಳಿದ.

ನಾಟಕದ ಕಂಪನಿಗೆ ಸೇರಿದ ಕೆಲವು ವರ್ಷಗಳಲ್ಲಿಯೇ ಅನಂತ ತನ್ನ ಪ್ರತಿಭೆಯಿಂದ, ಶ್ರಮಜೀವನದಿಂದ ಪ್ರಮುಖ ನಟನ ಸ್ಥಾನಕ್ಕೆ ಬಂದಿದ್ದ. ನಾಲ್ಕಾರು ಕಂಪನಿಗಳಲ್ಲಿ ಕೆಲಸ ಮಾಡಿದ್ದ. ಹತ್ತಿಪ್ಪತ್ತು ನಾಟಕಗಳಲ್ಲಿ ಅಭಿನಯಿಸಿದ್ದ. ನೂರಾರು ಊರುಗಳನ್ನು ತಿರುಗಿದ್ದ. ವರ್ಷಗಳ ಕಹಿ-ಸಿಹಿ ಅನುಭವ ಅವನ ಹಸಿ ದೃಷ್ಟಿಯನ್ನು ಪಕ್ವ ಮಾಡಿತ್ತು. ಗಣ್ಯ ಜನರು ತಿರಸ್ಕಾರದಿಂದ ನೋಡುತ್ತಿದ್ದ ನಾಟಕ ದವರಲ್ಲಿ ಅನೇಕರು ಹೊಂದಿದ್ದ ಆದರ್ಶ, ಕಲಾರಾಧನೆಗಳು ಅವನಲ್ಲಿ ಗೌರವನ್ನು ಹುಟ್ಟಿಸಿದ್ದವು. ಪ್ರತಿಭೆ, ಆದರ್ಶಗಳಿಲ್ಲದಿದ್ದ ಅಥವಾ ಸುಪ್ತವಾಗಿದ್ದ ಜನರನೇಕರಲ್ಲಿ ಕಂಡುಬರುತ್ತಿದ್ದ ಸಹನೆ, ವಿನಯ, ಕರುಣೆ, ಸಹಕಾರಗಳಿಗೆ ಅವನು ಮಾರು ಹೋಗಿದ್ದ. ರಂಗಸ್ಥಳದ ಮೇಲೆ ಪುನರ್ಜನ್ಮ ಪಡೆಯುತ್ತಿದ್ದವರಲ್ಲಿ ಬಹುಮಂದಿ ಜೀವನದಲ್ಲಿ ಸರಳ ಸ್ವಭಾವದವರಾಗಿದ್ದರು. ಅನಂತನಿಗೆ ಅವರೆಲ್ಲರ ಸಹವಾಸದಿಂದ ಶಾಂತಿ ಸಿಕ್ಕಿತ್ತು. ಮನಸ್ಸು ಬಯಸುತ್ತಿದ್ದ ಕೆಲಸ, ಅದರಲ್ಲಿ ವಿಜಯ ಅವನಿಗೆ ದೊರಕಿತ್ತು. ಪ್ರಪಂಚಕ್ಕೆ ಗುರುವಾಗುವ ಆಕಾಂಕ್ಷೆ ಅವ ನಿಂದ ದೂರವಾಗಿತ್ತು. ಬದಲು ತನ್ನ ಕಲೆಯಿಂದ ಜನಕ್ಕೆ ಆನಂದ ಕೊಡುವುದು, ಆ ವಿಶಿಷ್ಟಾನಂದದಿಂದ ಅವರ ಮನಸ್ಸುಗಳನ್ನು ವಿಸ್ತರಿ ಸುವುದು ಅವನ ಹೆಗ್ಗುರಿಗಳಾದವು.

ಅನಂತನ ಆಕಾಂಕ್ಷೆಗಳನ್ನು, ಕನಸುಗಳನ್ನು ಕೇಳಿ ಎಂದೆ ತುಂಬಿ ಬಂತು ಗೌರವದಿಂದ, ವಿಶ್ವಾಸದಿಂದ ಅವನಿಗೆ ಹಾರೈಕೆಗಳನ್ನು ಅರ್ಪಿಸಿ ಮನೆಗೆ ಬಂದೆ.

ಮುಂದೆ ಅನಂತ ಸ್ವಂತ ಕಂಪನಿಯನ್ನು ರಚಿಸಿದ. ಒಂದು ಸಣ್ಣ ಗುಂಪು ಪ್ರತಿಭಾವಂತ ಕನಸಿಗರು ಅವನ ಕಂಪನಿಗೆ ಸೇರಿದರು. ಕಂಪನಿ ಹೊಸ ಪ್ರಯೋಗಗಳು ಇವುಗಳಿಂದ ಬುದ್ಧಿವಂತ ಜನರ ಮೆಚ್ಚಿಗೆ, ಮನ್ನಣೆಗಳನ್ನು ಗಳಿಸಿತು. ಊರಿಂದ ಊರಿಗೆ, ಮೆಟ್ಟಿಲೆ ನಿಂದ ಮೆಟ್ಟಿಲಿಗೆ ಹಾರುತ್ತಾ ಹೋದ ಅನಂತ. ಅವನಿಗೆ ಬೇಕಾಗಿದ್ದ

ಉತ್ತರದಲ್ಲಿ ಪದಗಳು ಒಂದೊಂದಾಗಿ ಕೂಡುತ್ತ ಬಂದವು. ಉತ್ತರ ಹಾಳೆಯನ್ನು ತುಂಬಿ ಪೂರ್ಣ ವಿರಾಮವಲ್ಲಿ ಅಂತ್ಯವಾಗುವುದನ್ನು ಕಾಯುತ್ತ ನಡೆದ ಅನಂತ.

* * * *

ಚಿಕ್ಕಪ್ಪನ ಧ್ವನಿ ಕೋಣೆಯನ್ನು ತುಂಬಿದ್ದ ಕತ್ತಲೆಯಲ್ಲಿ ಲೀನವಾಯಿತು. ನನ್ನ ನಿಟ್ಟುಸಿರು ಕತೆಗೆ ಮಂಗಳವನ್ನು ಹಾಡಿತು. ಯಾವಾಗಲೊ ಪ್ರಾರಂಭವಾಗಿದ್ದ ಮಳೆ ರಾತ್ರಿಯನ್ನು ಮುಂದೂಡಿಕೊಂಡು ಬಂದಿತ್ತು. ಚಿಕ್ಕಪ್ಪನ ದೃಷ್ಟಿ ಮಳೆಯ ತೆರೆಯನ್ನು ದಾಟಿ ಹೋಗಿತ್ತು. ನಾನು ಎದ್ದು ಪತ್ರಿಕೆಯನ್ನು ಪುಸ್ತಕದ ಬೀರುವಿನೊಳಗಿಟ್ಟೆ. ಕಿಟಕಿಯ ಬಳಿ ನಿಂತು ನನ್ನ ದೃಷ್ಟಿಯನ್ನು ಚಿಕ್ಕಪ್ಪನವರ ಹಿಂದೆಯೇ ಹಾರಿಸಿದೆ.

# ಆಗಸ್ಟ್ ಹದಿನೈದು

ಬೊಂಬಾಯಿನಿಂದ ಕಲ್ಯಾಣ,

ಒಂದು ಗಂಟೆಯ ಪ್ರಯಾಣ...'

ರೈಲಿನ ಚಕ್ರ ಹಾಡಿಗೆ ತಾಳ ಹಾಕುತ್ತಿತ್ತು. ಗಾಡಿ ತಲೆದೂಗುತ್ತಿತ್ತು. ಗಂಟಲನ್ನು ಬಿಟ್ಟು ಹೊರಗೆ ಬರದ ಹಾಡು ತಡೆಯಿಲ್ಲದೆ ಸಾಗಿತ್ತು.

ಬೊಂಬಾಯಿನಿಂದ ಕಲ್ಯಾಣ,

ಒಂದು ಗಂಟೆಯ ಪ್ರಯಾಣ....'

ದೀಪಸಾಲಿನ ಮುನ್ನುಡಿ ಇಲ್ಲಪೆಯೇ ರೈಲು ನಿಲ್ದಾಣ ಕತ್ತಲೆಯಿಂದ ಎದ್ದು ಬಂದು ಮುಂದೆ ನಿಂತಿತು. ಹತ್ತಾರು ಜನರ ಜೊತೆಗೆ ಅವನೂ ಗಾಡಿಯಿಂದ ಧುಮುಕಿದ. ಅವರೊಡನೆಯೇ ಸಾಗಿ ಬಾಗಿಲಿನಲ್ಲಿ ಕಾದು ನಿಂತಿದ್ದ ಅಧಿಕಾರಿಗೆ ಕೈಯಲ್ಲಿದ್ದ ರೊಟ್ಟಿನ ತುಂಡನ್ನು ನೀಡಿದ. ನಿಲ್ದಾಣದ ಬಾಗಿಲಿನ ಚಳಿ ಅವರನ್ನೆಲ್ಲ ಕತ್ತಲೆಗೊಪ್ಪಿಸಿ ಹತ್ತಿರವೇ ನಿಂತಿದ್ದ ಬಸ್ಸನ್ನು ಹತ್ತಿದ. ಐದು ನಿಮಿಷಗಳ ಬಳಿಕ, ಇನ್ನಾರೂ ಅದರ ಆಶ್ರಯವನ್ನು ಕೋರಿ ಬರದಿದ್ದನ್ನು ನೋಡಿ ಒಂದು ನಿಟ್ಟುಸಿರೆಳೆದು ಬಸ್ಸು ಹೊರಟಿತು.

ಚಲಿಸುತ್ತಿದ್ದ ಮಂಕು ದೀಪದ ಕೋಣೆಯಲ್ಲಿ ಏಳೆಂಟು ಜನ ಮಾತ್ರ ಇದ್ದರು. ಹೆಂಗಸರಿಗಾಗಿ ಕಾಯ್ದಿಟ್ಟ ಸ್ಥಳ ಖಾಲಿಯಾಗಿತ್ತು. ಎಲ್ಲರಿಂದಲೂ ದುಡ್ಡು ತೆಗೆದುಕೊಂಡ ಮೇಲೆ ಕಂಡಕ್ಟರ್ ಮೂಲೆಯೊಂದರಲ್ಲಿ ಕುಳಿತು ಕಾಲು ಚಾಚಿದ. ಅವನ ಪಕ್ಕದಲ್ಲಿ ಕುಳಿತಿದ್ದ ಚಿಲ್ಲರೆ ಅಂಗಡಿ ವ್ಯಾಪಾರಿಗಳು ಸಿಂಧಿಯಲ್ಲಿ ಮಾತನಾಡತೊಡಗಿದರು.

ಅವನ ದೃಷ್ಟಿ ಕಿಟಕಿಯಾಚೆಯ ಕತ್ತಲಿನತ್ತ ಸಾಗಿತು. ವೈವಿಧ್ಯ ರಹಿತ, ಘನೀಭೂತ ಕತ್ತಲು ಬೇಸರವೆನಿಸಿದಾಗ ಕಣ್ಣು ಮುಚ್ಚಿದ. ರೆಪ್ಪೆಗಳು ಕೂಡುವ ಮೊದಲೇ ಅವುಗಳೆಡೆಗೆ ಓಡಿಬಂದ ಕತ್ತಲೆ ಕಣ್ಣಿಗೆ ತಂಪು ಕೊಟ್ಟಿತು.

ನಿಲ್ದಾಣದಿಂದ ಕ್ಯಾಂಪಿಗೆ ಇಪ್ಪತ್ತು ನಿಮಿಷ.

ಕಳೆದ ಹನ್ನೆರಡು ಗಂಟೆಗಳಲ್ಲಿ ನಡೆದ ಘಟನೆಗಳು ಇಪ್ಪತ್ತು ನಿಮಿಷಗಳಲ್ಲಿ, ಸಂಕ್ಷಿಪ್ತವಾಗಿ ಸ್ಮೃತಿಪಟಲದ ಮೇಲೆ ಹಾದು ಹೋದುವು.

ಸ್ವಾತಂತ್ರ್ಯ ದಿನೋತ್ಸವಕ್ಕಾಗಿ ಅಂದಿನ ಸಂಜೆ ಬೊಂಬಾಯಿನ ದೊಡ್ಡ ಸರ್ಕಾರಿ ಕಟ್ಟಡಗಳನ್ನು ದೀಪಗಳಿಂದ ಅಲಂಕರಿಸಲಾಗುತ್ತ ದೆಂದು ತಿಂಗಳ ಹಿಂದೆಯೇ ಘೋಷಿಸಲಾಗಿತ್ತು. ಈ ಅಪೂರ್ವ ದೃಶ್ಯವನ್ನು ನೋಡಲು ಹೋಗಬೇಕೆಂದು ತನ್ನ ಮೂವರು ಸ್ನೇಹಿತ ರೊಂದಿಗೆ ಅವನು ನಿರ್ಧರಿಸಿದ್ದ. ಆದರೆ ಅಂದು ಹೊರಟಿದ್ದು ಅವ ನೊಬ್ಬನೇ. ಅವರೊಬ್ಬರ ಕೈಯಲ್ಲೂ ಅಷ್ಟು ದುಡ್ಡಿರಲಿಲ್ಲ. ಅವ ರೆಲ್ಲರೂ ತಿಂಗಳಿನ ಮೊದಲ ವಾರದಲ್ಲಿ ಊರಿಗೆ ಹಣ ಕಳುಹಿಸುತ್ತಿ ದ್ದರು. ಅವರೆಲ್ಲರಿಗೆ ಕೊಡುವಷ್ಟು ಹಣ ಇವನಲ್ಲಿರಲಿಲ್ಲವಾದ್ದರಿಂದ ಒಬ್ಬನೇ ಹೊರಡಬೇಕಾಯಿತು. ಇದರಿಂದ ಹೊರಡುವಾಗ ಮನಸ್ಸು ಮುದುಡಿತ್ತು. ಆದರೆ ಬೊಂಬಾಯಿಗೆ ಹೋದಮೇಲೆ ಉಲ್ಲಾಸ ತಾನೇ ತಾನಾಗಿ ಅರಳಿತ್ತು. ರಜೆಯ ದಿನದ ಉತ್ಸಾಹ-ಭರಿತ ಜನ ಸಂದಣಿಯಲ್ಲಿ ಇವನೆಡೆಗೆ ಕೈಚಾಚಿ ಬಂದ ಗೆಳೆಯರ ಗುಂಪಿನಲ್ಲಿ ಒಬ್ಬನಾದ.

ತಿರುಗಾಟ, ಮಾತುಕತೆ, ನಗು, ಊಟ, ಸಿನಿಮಾ ಇವುಗಳಲ್ಲಿ ದಿನ ಕಳೆಯಿತು. ಥಿಯೇಟರಿನಿಂದ ಹೊರಗೆಬಂದ ಸ್ವಲ್ಪ ಹೊತ್ತಿಗೆ ಕತ್ತಲೆ ಧಾವಿಸಿ ಬಂದಿತ್ತು. ಮರುಕ್ಷಣ ಕತ್ತಲೆಗೆ ಮರುಳು ಹಿಡಿ ಸುತ್ತ ಬಂತು ಬೆಳಕು. ಅಡಗಿ ಕುಳಿತಿದ್ದ ದೀಪಗಳು ಪ್ರತಿ ಕಟ್ಟಡದ

ಮೇಲೂ ಕಿಲಕಿಲ ನಗುತ್ತ ಎದ್ದು ಕುಳಿತವು. ಕತ್ತಲೆಯ ಮೈಯನ್ನು ಚುಚ್ಚಿ, ಹಿಂಸಿಸಿ, ವಿಜಯೋತ್ಸಾಹದಿಂದ ನಕ್ಕವು. ರಸ್ತೆಗಳನ್ನು ತುಂಬಿದ್ದ ಜನ ಜಯಘೋಷ ಮಾಡಿದರು. ಜೊತೆಯ ಯುವಕ ರೊಡನೆ ಅವನೂ ಸಡಗರದಿಂದ ಕೂಗಾಡಿದ. ಜನರೊಡನೆ ಸಂಕೋಚವಿಲ್ಲದೆ ಬೆರೆತ. ಜನರು ರಸ್ತೆಗಳನ್ನು ಬಿಟ್ಟು ಮನೆಗಳನ್ನು ಸೇರ ತೊಡಗಿದಾಗ ಎಚ್ಚೆತ್ತು, ಗೆಳೆಯರಿಂದ ಬೀಳ್ಕೊಂಡು ರೈಲನ್ನು ಹತ್ತಿದ.

*

ಸಿಂಧಿ ಮಾತು ಇದ್ದಕಿದ್ದಂತೆ ನಿಂತಿತು. ಕಣ್ತೆರೆದ. ಬಸ್ಸು ಒಮ್ಮೆ ನರಳಿ ನಿಂತುಕೊಂಡಿತು. ಕ್ಯಾಂಪಿನ ಥಿಯೇಟರ್ ಪಕ್ಕದಲ್ಲಿ ಕಣ್ಣು ಮಿಟುಕಿಸುತ್ತಿತ್ತು. ಎಲ್ಲರೊಡನೆ ತಾನೂ ಇಳಿದ. ಮನೆಯತ್ತ ನಡೆಯತೊಡಗಿದ....

ಬಸ್ ನಿಂತಲ್ಲಿಂದ ಮನೆಗೆ ಹತ್ತು ನಿಮಿಷ.

ಮನೆ? ಒಂದೇ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ ನಾಲ್ಕು ಅವಿವಾಹಿತ ತರುಣರು ವಾಸಿಸುತ್ತಿದ್ದ ಮೂರು ಕೋಣೆಗಳ ಒಂದು ಒರಟು ಕಟ್ಟಡ: ವಾಸಿಸುವ ಕೋಣೆ, ಅಡಿಗೆ ಮನೆ, ಬಚ್ಚಲ ಮನೆ, ಅಡಿಗೆಯವನು ಅಡಿಗೆ ಮನೆಯಲ್ಲಿಯೇ ಮಲಗುತ್ತಿದ್ದ.

ಮನೆಯೆಡೆಗೆ ನಡೆಯತೊಡಗಿದ. ಬೊಂಬಾಯಿನಲ್ಲಿ ಸಂಭ್ರಮದಿಂದ ಅರಳಿ ಜನರೆಡೆಗೆ ತಿರುಗಿದ್ದ ಮನಸ್ಸು ಈಗ ಮುದುಡಿ ಎಂದಿನಂತೆ ಏಕಾಕಿ ಮೊಗ್ಗಾಗಿತ್ತು. ಜನರ ಸಂಪರ್ಕದಿಂದ ಬಿಸಿಗೊಂಡಿದ್ದ ಮೈ ಈಗ ರಾತ್ರಿಯಷ್ಟೇ ತಂಪಾಗಿತ್ತು.

ದಾರಿ ಮೊಟಕಾಗುತ್ತ ಬಂತು. ಎರಡು ಬದಿಗಳಲ್ಲೂ ಮೊಣಕಾಲನ್ನು ಊರಿ ಕುಳಿತಿದ್ದ ನಿರಾಶ್ರಿತರ ಗುಡಿಸಲುಗಳು ಕತ್ತಲೆಗೆ ಏನೂ ಪ್ರತಿಭಟನೆಯನ್ನು ತೋರದೆ ಶರಣಾಗತವಾಗಿದ್ದವು. ಕೆಲಸಕ್ಕೆ ಸೇರಿದ ಹೊಸತರಲ್ಲಿ ನಿರಾಶ್ರಿತರ ಮುರುಕು ಮನೆ, ಮುರುಕು

ಮುರುಕು ಮನಸ್ಸುಗಳಿಂದ ಅಗಾಧವಾದ ಖಿನ್ನತೆಯುಂಟಾಗುತ್ತಿತ್ತು. ಈಗ ರೂಢಿಯಿಂದ ಖಿನ್ನತೆಯ ಮೇಲೆ ಉದಾಸೀನದ ನಾಯಿ ಕೊಡೆಗಳು ಬೆಳೆದಿದ್ದವು.

ದೂರದಲ್ಲಿ ಅಂಬರನಾಥನ ದೀಪಗಳು ಕಾಣಿಸುತ್ತಿದ್ದವು. ಬೆಳಕಿನ ಪೂರ್ಣ ವಿರಾಮ ಚಿಹ್ನೆಗಳು. ವಾಕ್ಯಗಳಾವುವು? ....ಬೆಳಗಿನ ಹೊತ್ತು ಬೃಹದಾಕಾರದ ಸಿಗಾರಿನಂತೆ ಕಾಣುತ್ತಿದ್ದ ಕಾರ್ಖಾನೆಯ ಹೊಗೆ ಕೊಳವೆಗೆ ಇಂದು ದೀಪಮಾಲೆಯನ್ನು ಸುತ್ತಿದ್ದರು. ಭೂಮಿಯಿಂದ ಹೊರಟ ಬೆಳಕಿನ ಸರಳರೇಖೆಯ ಚಿಲುಮೆ. ಅಚಲ ಕಾರಂಜಿ. ಅದರ ಪಕ್ಕದಲ್ಲಿ ಇನ್ನೊಂದು ಕಾರ್ಖಾನೆಯ ಹೊಗೆಕೊಳವೆ ಮೊದಲಿನದರಷ್ಟು ಎತ್ತರವಿಲ್ಲ; ಅದಕ್ಕಿಂತ ತೆಳುವು. 'ಚಿನ್ನದ ಪೆನ್ಸಿಲ್. ಏನು ಪ್ರಯೋಜನ ? ಸೀಸವಿಲ್ಲ.

ಮಾಂಸದಂಗಡಿಗಳ ಬಳಿ ಬಂದ. ಬಾಗಿಲುಗಳಿಲ್ಲದ ಸಣ್ಣ ಮರದ ಶಿಥಿಲ ಕಟ್ಟಡಗಳು. ಅವುಗಳಿಂದ ಪಿಸುಮಾತು, ಅಡಗಿಸಿದ ನಗು ಕೇಳಿಬಂತು. ಬಳಿಯಲ್ಲಿ ಮಲಗಿದ್ದ ನಾಯಿಗಳು ಎಚ್ಚರಗೊಂಡು ಸುತ್ತಲೂ ನೋಡಿದವು, ಅನಾಸಕ್ತಿಯಿಂದ ಮತ್ತೆ ಮಲಗಿದವು. ಈ ಕಟ್ಟಡಗಳಿಗೆ ಏನೇನು ಉಪಯೋಗ! ಬೆಳಗಿನ ಹೊತ್ತು ಕೊಲೆ, ಮಾರಾಟ; ರಾತ್ರಿ ಮಾರಾಟ, ಕೊಲೆ. ನಿಲ್ದಾಣಕ್ಕೆ ಅನತಿ ದೂರದಲ್ಲಿ ಮರದ ಕೆಳಗೆ ನಿಂತಿದ್ದ ದೊಡ್ಡ ಕಾರು: ಬಸ್ಸಿನ ದೀಪಗಳಿಗೆ ಬೆದರದೆ ಮರಗಳ ಮರೆಯಲ್ಲಿ ನಿಂತಿತ್ತು. ವೈಭವಯುಕ್ತ ದೊಡ್ಡ ಕಾರು, ಮರದ ಶಿಥಿಲ ಕಟ್ಟಡ, ಹುಲ್ಲಿನ ಗುಡಿಸಲು-ಹೊದಿಕೆಗಳಲ್ಲಿ ಮಾತ್ರ ವ್ಯತ್ಯಾಸ.

ಯೋಚನೆಯ ಸರಪಣಿಯನ್ನು ಕತ್ತರಿಸಲು ಲಗುಬಗೆಯಿಂದ ಓಡಿಬಂತು ರೈಲು. ದೊಡ್ಡ ದೀಪದ ಹಿಂದೆ ವೇಗವಾಗಿ ಚಲಿಸುತ್ತಿದ್ದ ಬೆಳಕಿನ ನೇರವಾದ ಗೆರೆ. ಚಕ್ರಗಳ ಸಾಲಿಗೆ ಕಟ್ಟಿದ್ದ ಮಿಣುಕು ಹುಳುಗಳು ರೈಲು ಹತ್ತಿರದಲ್ಲೇ ಸುಳಿದು ಕಣ್ಮರೆಯಾಯಿತು.

ಅವನ ಮುಂದೆ, ದಿಗಂತದತ್ತ ಧಾವಿಸುತ್ತಿದ್ದ ಸಣ್ಣ ಕಾರು ಇದ್ದಕಿದ್ದಂತೆ ಬಲಕ್ಕೆ ಹೊರಳಿತು. ಆಕಾಶ ಒಂದು ಕ್ಷಣ ಬೆಳಕಿನ ಬೀಸಣಿಗೆಯಾಯಿತು. ಮರುಕ್ಷಣದಲ್ಲಿ ಆಕಾಶ, ದಿಗಂತ, ದಾರಿ, ಕಾರು ಎಲ್ಲವೂ ಕತ್ತಲೆಯಲ್ಲಿ ಮರೆಯಾದುವು.

ಕಾರಿನ ದೀಪದ ಬೆಳಕಿನಲ್ಲಿ ಅದೃಶ್ಯವಾಗಿದ್ದ ಬೀದಿಯ ದೀಪಗಳು ಮತ್ತೆ ನಗುತ್ತ ನಿಂತವು. ಹಸಿವಿನ ನಗು. ದೀಪದ ಕಂಬಗಳ ಕೆಳಗೆ, ತುಂಬಿದ ಮಳೆಹಳ್ಳಗಳಲ್ಲಿ ಬೆಳಕು ನೈದಿಲೆಗಳು ಮೂಡಿದ್ದವು. ಮಣ್ಣಿನಲ್ಲಿ ಇಂಗದೆ ದಾರಿಯುದ್ದವೂ ಹರಿದಿದ್ದ ಮಳೆನೀರಿನ ಪಕ್ಕದಲ್ಲಿ ಬೈಸಿಕಲ್ಲುಗಳೆರಡು ಸಾವಕಾಶವಾಗಿ ಸಾಗಿದವು. ನೆಲದುದ್ದ ಮಿಂಚು. ವಕ್ರಗತಿಯ ಹೊನ್ನು ಹೊಳೆ. ರಾಜ್ಯತ್ಯಾಗ ಮಾಡಿದ ದೊರೆಯ ಕಿರೀಟ, ವಸ್ತ್ರಾಭರಣಗಳು ನೆಲದ ಮೇಲೆ. ಪ್ರಣಯ ಕೇಳಿಯಲ್ಲಿ ನಿರತರಾಗಿದ್ದ ಹಳದಿ ಬಣ್ಣದ ಹಾವುಗಳು.

ಎಲ್ಲಿಂದಲೋ ಸಿನೆಮಾಹಾಡು ಕೇಳಿ ಬಂತು. ಕಡೆಯ ಆಟ ಮುಗಿಯಿತೇನೋ 'ತಾರಾ ಗಗನಮೇ...' ತಲೆಯೆತ್ತಿ ನೋಡಿದ. ಆಕಾಶದಲ್ಲೂ ಸ್ವಾತಂತ್ರ್ಯೋತ್ಸವದ ಸಂಭ್ರಮ. ಲಕ್ಷೋಪಲಕ್ಷ ನಕ್ಷತ್ರಗಳು. ಬೊಂಬಾಯಿನಲ್ಲಿ ವಿದ್ಯುದ್ದೀಪಮಾಲೆಗಳ ನಡುವಿನಲ್ಲಿ ಇವುಗಳನ್ನು ಗಮನವಿಟ್ಟು ನೋಡಿರಲಿಲ್ಲ. ಇಲ್ಲಿ ನಿಸರ್ಗಕ್ಕೆ ಮಾನವನ ಸ್ಪರ್ಧೆಯಿಲ್ಲ. ಬೊಂಬಾಯಿನಲ್ಲಿ ವಿದ್ಯುದ್ದೀಪಗಳ ಗೊಂದಲಕ್ಕೆ ಸಿಕ್ಕಿ ಆಕಾಶ ಕೆಂಪಾಗಿತ್ತು. ಇಷ್ಟವಿಲ್ಲದಿದ್ದರೂ ಆ ದೀಪಗಳನ್ನು ಪ್ರತಿಬಿಂಬಿಸಿತ್ತು. (ಅದಕ್ಕೂ ಸರ್ಕಾರದ ಆಜ್ಞೆಯಾಗಿತ್ತೇನೋ! ಸಮುದ್ರ ಸ್ವಲ್ಪವೂ ಪಕ್ಷಪಾತವಿಲ್ಲದೆ ವಿದ್ಯುದ್ದೀಪಗಳು, ನಕ್ಷತ್ರಗಳು ಎರಡನ್ನೂ ಪ್ರತಿಬಿಂಬಿಸಿತ್ತು. ಎರಡು ವಿವಿಧ ದೀಪಗಳ ಸಮ್ಮಿಲನದಿಂದ ಸಮುದ್ರದಲ್ಲಿ ಕಪ್ಪು ಬಣ್ಣಕ್ಕೆ ಅವಕಾಶವೇ ಇಲ್ಲದಂತಾಗಿತ್ತು

ದೀಪ, ದೀಪ. ಎಲ್ಲಿ ನೋಡಿದರೂ ದೀಪ ರಸ್ತೆಗಳುದ್ದ, ಕಟ್ಟಡಗಳ ಸುತ್ತ ಬಣ್ಣ ಬಣ್ಣದ ದೀಪಗಳು. ರಸ್ತೆಗಳಲ್ಲಿ ದೀಪಗಳಷ್ಟೇ

ಜನ. ಅವುಗಳಷ್ಟೇ ವರ್ಣ ವೈವಿಧ್ಯದ ಉಡುಪುಗಳನ್ನು ಧರಿಸಿ ನಲಿದಾಡುತ್ತಿದ್ದ ಜನಃ ಬಾಣ ಬಿರುಸುಗಳನ್ನು ನೋಡಿ ಕುಣಿದಾಡುವ ಹುಡುಗರು.

ಹೋಟೆಲುಗಳ ಬಳಿಯಂತೂ ಕಾಲಿಡಲಾಗದಷ್ಟು ಜನಸಂದಣಿ. ದೀಪಗಳಿಂದ, ಹೂಮಾಲೆಗಳಿಂದ ಅಲಂಕರಿಸಲ್ಪಟ್ಟ ಹೋಟೆಲುಗಳು. ದೊಡ್ಡ ಹೋಟೆಲುಗಳ ಸುತ್ತ ದೊಡ್ಡ ಕಾರುಗಳು. ಸಣ್ಣ ಹೋಟೆಲುಗಳ ಸುತ್ತ ಸಣ್ಣ ಕಾರುಗಳು ದೊಡ್ಡ ಹೋಟಲಿನೊಳಗೆ ಪ್ರವೇಶಿಸಲಾಗದ ಜನರು ಹೊರಗೆ ನಿಂತು ಒಳಗೆ ಹೋಗುವವರನ್ನು ನೋಡಿ ಬೆರಗಾಗುತ್ತಿದ್ದರು. ಹಣವಂತರು, ಸಮಾಜದ ಮುಂದಾಳುಗಳು, ರಾಜಕೀಯ ಮುಖಂಡರು, ಪ್ರಖ್ಯಾತ ಕಲಾವಿದರು ನಟನಟಿಯರು..

ಕಾರುಗಳ ಕೋಟೆಯನ್ನು ದಾಟಿ ದೀಪಾಲಂಕೃತ ಅರಮನೆಯ ಒಳಗೆ ಹೋದಾಗ ಒಳಗೆ ಕಂಡುದು ಶೂನ್ಯ. ನೃತ್ಯಶಾಲೆಯಲ್ಲಿ ಕೇವಲ ಬಣ್ಣ ಬಳಿದುಕೊಂಡ ಸೂತ್ರದ ಬೊಂಬೆಗಳು. ತಮ್ಮ ಅಧಿಪತಿ ಹಣದ ಮುಂದೆ ಕೆಂಪು ದಾರದ ನಗೆಗಳನ್ನು ಚೆಲ್ಲುತ್ತ, ಒಬ್ಬರ ಕೈಯನ್ನೊಬ್ಬರು ಅದುಮುತ್ತ, ಎಲ್ಲರೂ ಸೇರಿ ತಮ್ಮ ಒಡೆಯನಿಗೆ ಸಾಷ್ಟಾಂಗ ನಮಸ್ಕಾರಗಳನ್ನರ್ಪಿಸುತ್ತಿದ್ದ ರೇಶಿಮೆ ಉಟ್ಟ ಕಬ್ಬಿಣದ ಬೊಂಬೆಗಳು. ಆದರೆ ಪ್ರಬಲ, ಉಪದ್ರವಕಾರಿ, ನಿರ್ದಯಿ ಪ್ರೇತಗಳು. ಕೆಂಪು ಬಾಯಿ, ಕೆಂಪು ಬೆರಳು, ಕೆಂಪು ಕೊರಳಿನ ವಿನಾಶಕಾರಿ ರಕ್ಕಸಿಯರು. ನೃತ್ಯಶಾಲೆಯ ಗೋಡೆಗಳ ಮೇಲೆಲ್ಲ ಜೇಡನ ಬಲೆ ಹಬ್ಬಿತ್ತು. ನೃತ್ಯದಲ್ಲಿ ಮಗ್ನರಾದ ಜೋಡಿಗಳು ಇದೂ ಒಂದು ಅಲಂಕಾರವೆಂದು ತಿಳಿದರು. 'How clever of the decorator, my dear !' ಬಲೆಯ ರೇಶಿಮೆಯ ಮೇಲೆ ಚಿನ್ನದ ಪುಡಿ ಮಿನುಗುತ್ತಿತ್ತು; ವಜ್ರಗಳು ಗರ್ವದಿಂದ ತುಟಿಗಳನ್ನು ಗಂಟು ಹಾಕಿಕೊಂಡಿದ್ದವು. ಇವುಗಳನ್ನೆಲ್ಲಾ ಮೆಚ್ಚುತ್ತ ಜನರು ನರ್ತಿಸುತ್ತಿದ್ದರು. ಒಬ್ಬರ ತೋಳ ಬಲೆಯಲ್ಲಿ ಒಬ್ಬರು. ಅದೇ, ಅದೇ ನೃತ್ಯ;

ಅದೇ, ಅದೇ ವೃತ್ತ. ಹತ್ತಲಾಗದ ಎತ್ತರದ ಚಿನ್ನದ ಗೋಡೆಗಳು ಹೊರಗಿನ ಪ್ರಪಂಚವನ್ನು ಅವರಿಂದ ಮರೆಮಾಡಿದ್ದವು.

ಹೌಹಾರಿ ಒಂದು ಹೋಟಲಿಗೆ ಹೋಗಿದ್ದ. ಇದು ಮೊದಲಿನ ಕ್ಕಿಂತ ಸ್ವಲ್ಪ ಸಣ್ಣದು. ನೆರೆದವರಲ್ಲಿ ಬಹುಪಾಲು ಜನ ಸಿಹಿ ತಿಂಡಿ ಗಳನ್ನು ತಿನ್ನುವುದರಲ್ಲಿ ಮಗ್ನರಾಗಿದ್ದರು. ಫ್ಯಾಶನ್ನಿನ ಬೇಟೆ ನಾಯಿ ಗಳ ಗುಂಪಿಗೆ ಸೇರಿದವರು. ಬಹಳ ಹಣವನ್ನು ವೆಚ್ಚಮಾಡಲಾಗದ ವರು, ವೆಚ್ಚಮಾಡಲು ಇಷ್ಟವಿಲ್ಲದವರು. ಯಾರೂ ಕೇಳದ ರೇಡಿ ಯೋದ ಹಾಡಿಗೆ ತಟ್ಟಿ, ಚಮಚಗಳ ಪ್ರಶಂಸೆ ಸಿಕ್ಕುತ್ತಿತ್ತು. ಮಾತಿ ಲ್ಲದ, ನಗೆಯಿಲ್ಲದ ಜನರು ದೃಷ್ಟಿಯನ್ನು ತಟ್ಟೆಯ ಬಿಳಿಯ ವೃತ್ತದಲ್ಲಿ ಸೆರೆ ಇಟ್ಟಿದ್ದರು.

ಸಣ್ಣ ಹೋಟಲು ಒಂದಕ್ಕೆ ಹೋದ. ಬೆಳಕು ಬಹಳ ಇಲ್ಲದ ಪ್ರದೇಶದಲ್ಲಿ ಇದ್ದ ಹೋಟಲು ರೇಡಿಯೋದ ಬದಲು ನೆಗಡಿ ಗಂಟ ಲಿನ ಗ್ರಾಮೋಫೋನ್. ಚಹಾ ಕುಡಿಯಲು ಬಂದ ಕೂಲಿಕಾರರು, ನಿರುದ್ಯೋಗಿಗಳು, ವಿದ್ಯಾರ್ಥಿಗಳು, ಪತ್ರಿಕೋದ್ಯಮಿಗಳು. ಆದರಂ ತೆಯೇ ನಿಧಾನವಾಗಿ ಚಹಾ ಕುಡಿಯುತ್ತ ಕುಳಿತ. ಮೂಲೆಯ ಮೇಜಿನ ಬಳಿ ಕುಳಿತಿದ್ದ ಹುಡುಗಿಯೊಬ್ಬಳು ಎದ್ದು ಇವನೆಡೆಗೆ ಬಂದಳು. ತಲೆಯಮೇಲೆ ಪೇರಿಸಿದ್ದ ಕಪ್ಪು ಕೂದಲು, ಪೆನ್ಸಿಲಿ ನಿಂದ ಕೊಯ್ದ ಅರ್ಧ ವರ್ತುಲಾಕಾರದ ಹುಬ್ಬುಗಳು, ಹುಚ್ಚು ಕೆಂಪು ಬಳಿದ ಬಾಯಿ, ಸೀಮೆಸುಣ್ಣದ ಬಿಳುಪು ಚರ್ಮ, ಒಂದು ಕ್ಷಣ ಮುಟ್ಟಿಬಿಟ್ಟ ತೂಗುದೀಪದ ಮೈ, ಅಗಲವಾದ ಹಸಿರು, ಹಳದಿ ನೆರದಿ, ನೇರಳೆ ಬಣ್ಣದ ಹೂಗಳ ಅಚ್ಚು ಹೊಡೆದಿದ್ದ ಲಂಗ. ನಿಯಾನ್ ದೀಪದ ನೆರಳು ಅಲಂಕರಿಸಿದ ಅಸ್ಥಿಪಂಜರವನ್ನು ತಬ್ಬಿಕೊಂಡಿತ್ತು. ಮುಖ ಹಸಿರು, ಹಳದಿ, ನೇರಳೆ ಬಣ್ಣದ, ತ್ರಿಕೋಣಾಕೃತಿಯ ಘೋರ ಅಡವಿಯಾಯಿತು. ಹಳದಿ ಚರ್ಮ, ಹಸಿರು ಹುಬ್ಬು, ನೇರಳೆ ಬಾಯಿ. ಇವನ ಕಡೆಗೊಮ್ಮೆ ನೋಡಿ– ಅಡವಿಯಲ್ಲಿ ಎರಡು ಸರ್ಪಗಳು ನಾಲಿಗೆ ನೀಡಿದವು– ಮುಂದಿನ ಮೇಜಿಗೆ ನಡೆದಳು.

ದೀಪ, ದೀಪ. ದೀಪದ ಚಾವಣಿಯ ಕೆಳಗೆ ಬೆರಗು ಬಡಿದ ಬೆಳಕಿಲ್ಲದ ಜನ. ಯಾರ ಬಾಯಲ್ಲೂ ಸ್ವಾತಂತ್ರ್ಯದ ಮಾತಿಲ್ಲ....

ದೀಪದ ತೀಕ್ಷ್ಣ ಎಳೆ ಕಣ್ಣನ್ನು ಕುಕ್ಕಿತು. ಬೆಚ್ಚಿ ಎದುರಿಗೆ ನೋಡಿದ. ಕೋಣೆಯ ಬಾಗಿಲು ತೆಗೆದಿತ್ತು. ಒಳಗೆ ಸ್ನೇಹಿತರು ಇಸ್ಪೀಟಾಟವನ್ನಾಡುತ್ತಿದ್ದರು. ಅಂದವಿಲ್ಲದ ಕೋಣೆಯಲ್ಲಿ ಅಂದ ವಿಲ್ಲದ ಸಾಮಾನುಗಳು, ಅಂದವಿಲ್ಲದ ಜನ. ಹೊಸ್ತಿಲನ್ನು ದಾಟಲು ಕಾಲು ಹಿಂದೆಗೆಯಿತು. ಆದರೆ ಬೂಟುಕಾಲಿನ ಬರುವಿಕೆಯನ್ನು ಕಲ್ಲುನೆಲ ಆಟಗಾರರಿಗೆ ತಿಳಿದಿತ್ತು. ಎಲ್ಲರೂ ಬಾಗಿಲಿನ ಕಡೆಗೆ ತಿರುಗಿ ಉತ್ಸುಕಿತ ಪ್ರಶ್ನೆಗಳನ್ನು ಹಾಕತೊಡಗಿದರು.

ಉತ್ಸುಕಿತ ಪ್ರಶ್ನೆಗಳಿಗೆ ಸಂಕುಚಿತ ಉತ್ತರಗಳನ್ನು ಕೊಡುತ್ತ ಬಟ್ಟೆ ಬದಲಾಯಿಸತೊಡಗಿದ. ಅವನ ನಿರುತ್ಸಾಹ ಗೆಳೆಯರ ಪ್ರಶ್ನೆ ಗಳನ್ನು ತಡೆಗಟ್ಟಿತು. ನಿದ್ರೆ ಬರುತ್ತದೆಯೆಂದು ನೆವ ಒಡ್ಡಿ ಆಟ ವಾಡಲು ನಿರಾಕರಿಸಿದ. ಹಸಿವಿಲ್ಲವೆಂದು ಹೇಳಿ ಊಟ ಮಾಡದೆ ಮಲಗಿದ. ತಾವು ಅವನ ಜೊತೆಗೆ ಹೋಗದಿದ್ದಕ್ಕಾಗಿ ಅವನಿಗೆ ಸಿಟ್ಟು ಬಂದಿದೆಯೆಂದು ಗೆಳೆಯರು ತಿಳಿದರು. ಆಟ ಸಪ್ಪೆಯಾಯಿತು.

ತನ್ನ ಮೌನವನ್ನು ಗೆಳೆಯರು ತಪ್ಪು ತಿಳಿದರೆಂದು ಅವನಿಗೆ ಗೊತ್ತಾಯಿತು. ಎದ್ದು ಆಟಕ್ಕೆ ಸೇರಿಕೊಳ್ಳಲು ಪ್ರಯತ್ನಿಸಿದ. ದೇಹವನ್ನು ಸುಟ್ಟ ನರಗಳ ತುರಾಯಿಯನ್ನಾಗಿ ಮಾಡಿದ ದಣಿವು; ಮನಸ್ಸನ್ನು ಹಸು ಮೆಟ್ಟಿದ ಹುಲ್ಲುಗಿಡವನ್ನಾಗಿ ಮಾಡಿದ ಶೂನ್ಯತೆ, ಇವುಗಳು ಪ್ರಯತ್ನದ ಎರಡು ತೋಳುಗಳನ್ನೂ ಹಿಡಿದು ನಿಲ್ಲಿಸಿದವು. ಚಲನೆ ಹೊರಳಿನಲ್ಲಿ ಕೊನೆಗೊಂಡಿತು.

ಶೂನ್ಯದ ಕಪ್ಪು ಬಿಲದಿಂದ ಅಸ್ಪಷ್ಟ ನೋವಿನ ವೃತ್ತಗಳು ನೈಯುರಿಯುತ್ತ ಎದ್ದು ಬಂದವು. ತುಕ್ಕುಹಿಡಿದ ಮುಳ್ಳು ತಂತಿಯ ತುಂಡುಗಳು ಹಾಸಿಗೆಯ ಮೇಲೆ ಹೊರಳಾಡತೊಡಗಿದವು. ಹಾಸಿಗೆ ಯಲ್ಲಿ ಸ್ಥಳ ಸಾಲದೆ ಕೆಳಗೆ ಧುಮುಕಿ ಕೋಣೆಯನ್ನೆಲ್ಲ ತುಂಬಿದವು.

ಹರಿತವಾದ ತಂತಿಯು ಮೊನೆ ಕಣ್ಣನ್ನು ಚುಚ್ಚಿ, ರೆಪ್ಪೆಗಳನ್ನು ಮೀಟಿ, ಬೇರ್ಪಡಿಸಿತು. ಎದೆಯ ಮೇಲೆ ಸ್ಥಾಪಿತವಾದ ಕಬ್ಬಿಣದ ಭಾರ ಉಸಿರಿನೆಳೆಗೆ ಸುತ್ತಿಗೆ ಏಟು ಕೊಟ್ಟಿತು. ಮೇಲುಸಿರಿನ ತಪ್ಪು ಕಾಣಿಕೆಯನ್ನೊಪ್ಪಿಸಿ ಕಣ್ತೆರೆದ. ಮುಳ್ಳು ತಂತಿ ಅದೃಶ್ಯವಾಯಿತು. ರಕ್ತ ಬಳಿದುಕೊಂಡ ದೃಷ್ಟಿ ಕೋಣೆಯುದ್ದ ಕುಂಟತೊಡಗಿತು.

ಕಂದು ಬಣ್ಣದ ಹೆಂಚಿನ ಚಾಪೆಯ ಮೇಲೆ ಮರದ ತೊಲೆಗಳು ಹೆಬ್ಬಾವಿನಂತೆ ಮಲಗಿದ್ದವು. ಹಿಂದೆಂದೋ ಬಿಳುಪಾಗಿದ್ದ ಗೋಡೆಗಳು ಚಾವಣಿಯನ್ನು ಅಸಮಾಧಾನದಿಂದ ಹೊತ್ತು ನಿಂತಿದ್ದವು. ಮಂಚಗಳು, ಕುರ್ಚಿಗಳು, ಮೇಜು, ಮಂಚದ ಚೌಕಟ್ಟಿನ ಮೇಲೆ ಅವ್ಯವಸ್ಥೆಯಿಂದ ತೂರಾಡುತ್ತಿದ್ದ ಬಟ್ಟೆಗಳು, ಬಾಗಿಲಿರದ ಗೂಡಿನಲ್ಲಿ ಅಲಂಕಾರ ಸಾಮಗ್ರಿಗಳು....

ಕೋಣೆಯನ್ನು ಪರೀಕ್ಷಿಸುತ್ತಿದ್ದ ಕಟು ದೃಷ್ಟಿಗೆ ಮುಸುಕು ಹಾಕುವದಕ್ಕೋಸ್ಕರ ದೀಪ ಹಟಾತ್ತನೆ ಆರಿಹೋಯಿತು. ಆಟಗಾರರು ನಿಸ್ಸಂಕೋಚದಿಂದ ದೀಪವನ್ನು ಶಪಿಸಿದರು. ಅವರಲ್ಲೊಬ್ಬ ತಡವರಿಸುತ್ತ ಹೋಗಿ ಒಂದು ಹಣತೆಯನ್ನು ಹಚ್ಚಿತಂದ. ಮಲಗಲಿಷ್ಟವಿಲ್ಲದೆ ಬೆಳಕಿನ ಬರುವಿಕೆಯನ್ನು ಕಾಯ್ದು ಕುಳಿತರು.

ಮೇಜಿನ ಮಧ್ಯೆ ಇಟ್ಟಿದ್ದ ದೀಪ ಮೇಜಿನ ಸುತ್ತ ಕುಳಿತಿದ್ದವರನ್ನು ಕುತೂಹಲದಿಂದ ನೋಡತೊಡಗಿತು. ಅವನು ಮಲಗಿದ್ದಲ್ಲಿಂದಲೇ ಸೀಳು ಉರಿಯನ್ನು ದೃಷ್ಟಿಸಿದ. ಬತ್ತಿಯು ಉರಿಯುವ ಭಾಗ ಕಪ್ಪು ಬಣ್ಣಕ್ಕೆ ಬಿಗಿದುಕೊಂಡಿತ್ತು; ಇನ್ನೂ ಉರಿಯದೆ ಎಣ್ಣೆಯ ಮಡಿಲಲ್ಲಿ ನಿದ್ರಿಸುತ್ತಿದ್ದ ಭಾಗ ಮೃದುವಾಗಿ ಬೆಳ್ಳಗಿತ್ತು. ಜ್ವಾಲೆ ಮೆಟ್ಟಲು ಮೆಟ್ಟಲಾಗಿ ಉರಿಯುತ್ತಿತ್ತು. ಪ್ರತಿ ಮೆಟ್ಟಲಿನಲ್ಲೂ ಬೇರೆ ಬೇರೆ ಬಣ್ಣದ ದೀಪಗಳನ್ನು ಹಚ್ಚಿಡಲಾಗಿತ್ತು. ಹಸಿರು, ತೀಕ್ಷ್ಣ ನೀಲಿ, ಕೆಂಪು, ಕಿತ್ತಳೆ, ಹಳದಿ, ಬಿಳಿ, ಕುರ್ಚಿಯ ಮೇಲಿನ ಬಿಳಿ ಬಟ್ಟೆಗಳ ಮೇಲೆ ನೀಲಿ ನೆರಳು ಒರಗಿತ್ತು. ಬಟ್ಟೆ ಒಗೆಯುವ

ನೀರಿಗೆ ಹಾಕಿದ ನೀಲಿ ಹೆಚ್ಚಾದಂತೆ. ನೇರವಾಗಿ ಹಾರಿ ಬಂದ ಒಂದು ಸಣ್ಣ ಬೂದುಬಣ್ಣದ ಪತಂಗ ಬಿಸಿ ಎಣ್ಣೆಯಲ್ಲಿ ಬಿದ್ದಿತು. ಎರಡು ಕ್ಷಣ ಪ್ರತಿಭಟಿಸಿತು.

*　　　*　　　*

ಸ್ವಲ್ಪ ಹೊತ್ತಾದ ಮೇಲೆ, ಕತ್ತಲೆಯಿಂದ ಬೇಸರಗೊಂಡ ಆಟಗಾರರು ಮಲಗಲು ಎದ್ದರು. ಹಟಾತ್ತಾಗಿ ಕತ್ತು ಮುರಿಸಿಕೊಂಡ ದೀಪ ಎಣ್ಣೆ ಉಸಿರಿನಲ್ಲಿ ವಿಕಾರವಾಗಿ ಕೂಗಿಕೊಂಡಿತು ಓಡಿ ಬಂದ ಕತ್ತಲೆ, ಕೂಗು ಯಾರಿಗೂ ಕೇಳಿಸದಂತೆ ದೀಪದ ಗಂಟಲನ್ನು ಒತ್ತಿ ಹಿಡಿಯಿತು.

ಅರ್ಧ ಗಂಟೆ ಕಳೆದಿರಬಹುದು. ಕೋಣೆಯಲ್ಲಿ ಕತ್ತಲೆ, ಮೌನ ಇವುಗಳ ನಡುವಿನ ಚಕ್ಕಂದವನ್ನು ಆಲಿಸುತ್ತ ಮಲಗಿದ್ದವನು ಬೆಚ್ಚಿದ. ದೂರದ ಕಾರ್ಖಾನೆಯು ಸ್ವೈರನ್ನು ಪೈಶಾಚಿಕ ಕಂಠದಿಂದ ಕಿರಿಚಿತ್ತು. ಈ ವಿಕಟ ಧ್ವನಿಗೆ ಹೆದರಿ ಕತ್ತಲೆ ಓಡಿಹೋಯಿತು. ವಿದ್ಯುದ್ದೀಪ ಮತ್ತೆ ಬೆಳಗತೊಡಗಿತು. ಪರಿತ್ಯಕ್ತೆ ಮೌನ ರೋಧಿಸಲಾರಂಭಿಸಿದಳು. ಹೊರಗೆ ಮಳೆ ಸಣ್ಣಗೆ ಬೀಳತೊಡಗಿತು.

ಅವನು ಎದ್ದ. ಸ್ನೇಹಿತರು ಆರಿಸಲು ಮರೆತಿದ್ದ ದೀಪದ ಸ್ವಿಚ್ಚಿನ ಕಡೆಗೆ ನಡೆದ. ಸ್ವಿಚ್ಚಿನ ಪಕ್ಕದಲ್ಲಿ ಸ್ನೇಹಿತರಲ್ಲೊಬ್ಬ ತೂಗುಹಾಕಿದ್ದ ಕೃಷ್ಣನ ಚಿತ್ರ ಕಣ್ಣಿಗೆ ಬಿತ್ತು. ಗೆಳೆಯ ಇವನಿಂದ ಎಷ್ಟು ಹಾಸ್ಯ ಮಾಡಿಸಿಕೊಂಡರೂ ಚಿತ್ರವನ್ನು ಗೋಡೆಯ ಮೇಲಿನಿಂದ ತೆಗೆದಿರಲಿಲ್ಲ. ಚಿತ್ರವನ್ನು ನೋಡಿದ. ಬಹುಕಾಲ ಮುಚ್ಚಿದ್ದ ಕಣ್ಣುಗಳಿಗೆ ಚಿತ್ರ ಎಂದಿಗಿಂತ ದೊಡ್ಡದಾಗಿದ್ದಂತೆ ತೋರಿತು. ಆತ್ಮತೃಪ್ತ, ನಿರಾತಂಕ ಮುಖಭಾವದ ಕೃಷ್ಣನ ತುಟಿಗಳ ಮೇಲೆ ಕೃತಕ ಹುಸಿನಗೆ ಹಬ್ಬಿತ್ತು. ‘ ಮೋನಾಲೀಸಾವನ್ನು ಅನುಕರಿಸಲು ಪ್ರಯತ್ನಿಸುತ್ತಿದ್ದೀಯಾ ? ’ ಕಂದು ಬಣ್ಣದ ಗುಂಗುರು ತಲೆಕೂದಲಿನ ಸುತ್ತ ಒಂದೂವರೆ ಅಣೆ ಗಜದ ಮಿಂಚುಪಟ್ಟಿ, ಅದಕ್ಕೆ ಸಿಕ್ಕಿಸಿದ ಬಾಡಿದ ಒಂದು ನವಿಲು ಗರಿ. ಕುತ್ತಿಗೆಯಲ್ಲಿ ಮೂರು ಎಳೆಯ

ಮುತ್ತಿನ ಸರ ( ಒಂದು ಎಳೆಗೆ ಹನ್ನೆರಡು ಆಣೆ ), ಜಪಾನೀ ಕಬ್ಬಿನ ಸಿಪ್ಪೆಯ ಬಣ್ಣದ ಹಾರ. ಚಿತ್ರದ ತುಂಬ ಬೂದಿಯ ಬಣ್ಣಧ ಹತ್ತಿ-ಉಂಡೆ ಮೋಡಗಳು. ಮುಖದ ಹಿಂದೆ ಹೈಡ್ರೋಜನ್ ಬಾಂಬ್ ಸಿಡಿತದ ಧೂಳಿನ ಪ್ರಭಾವಳಿ.... ' ಅಯ್ಯೋ ಕೃಷ್ಣ ! '

ಒಳಗಿನಿಂದ ಎದ್ದು ಬಂದ ನಗು, ಹೊರಗಿನಿಂದ ಕುಣಿದುಬಂದ ಮಳೆ ಹನಿ ಎರಡೂ ಸೇರಿ ಕಪ್ಪು ವಿಷದ ಬಿಲಕ್ಕೆ ಮುಚ್ಚಳ ಹಾಕಿದವು. ಸ್ವಿಚ್ಚನ್ನಾರಿಸಿ ನಿದ್ರೆ ಮಾಡಲು ಹೋದ.

# ಶಾಂತಿ

ಎರಡನೆಯ ಬಾರಿ ಆಕಳಿಸಿದ ಕೂಡಲೆ ಸುತ್ತಲೂ ನೋಡಿದ. ಯಾರೂ ಇವನ ಬೇಸರವನ್ನು ಗಮನಿಸಿರಲಿಲ್ಲ. ಎಲ್ಲ ಮುಖಗಳೂ ಮಾತಿನಲ್ಲಿ ನಿರತವಾಗಿದ್ದುವು. ಕೆಲವು ಹೇಳುತ್ತಿದ್ದವು, ಕೆಲವು ಕೇಳುತ್ತಿದ್ದುವು.

ದೃಷ್ಟಿಯನ್ನು ಕೋಣೆಯ ಇನ್ನೊಂದು ಭಾಗದ ಕಡೆಗೆ ಹರಿಸಿದ. ಕಣ್ಣಿಗೆ ಬೆಳಕು ಬಂದಿತು. ಕೋಣೆಯ ಮೂಲೆಯೊಂದರಲ್ಲಿ ಒಂದು ಬೀರು, ಅದರ ಎರಡನೆಯ ಖಾನಿಯಲ್ಲಿ ಪುಸ್ತಕಗಳಿದ್ದವು. ಉತ್ಸಾಹದಿಂದ ಬೀರುವಿನ ಕಡೆಗೆ ನಡೆದ.

ಬೀರುವಿನ ಮೊದಲನೆಯ ಖಾನಿಯಲ್ಲಿ ಶಿವ ಪಾರ್ವತಿಯ ಗುಲಾಬಿ ಬಣ್ಣದ, ಮಣ್ಣಿನ ಪ್ರತಿಮೆಗಳಿಡಲ್ಪಟ್ಟಿದ್ದುವು. ಪಾರ್ವತಿಯ ಮುಖದ ಮೇಲಿನ ಪೆದ್ದು ಕಳೆ, ಶಿವನ ಸಿಹಿ ಮುಖಭಾವ ಇವುಗಳನ್ನು ಕಂಡು ಅವನ ಬಾಯಿ ವಂಕಿಯಾಯಿತು. ಬಂಗಾಲೀ ಚಿತ್ರ ಕಲಾಶಾಲೆಯ ಅವನತಿಯ ಬಗೆಗೆ ಚಿಂತಿಸಲು ತೊಡಗುವ ಮೊದಲೇ ಪ್ರತಿಮೆಗಳ ಎರಡೂ ಬದಿಗೆ ಇಡಲ್ಪಟ್ಟಿದ್ದ ಗಾಜಿನ ಹೂದಾನಿಗಳು ಕಣ್ಣಿಗೆ ಬಿದ್ದವು. ಅವುಗಳ ನಡುವಿನ ಸುತ್ತ ಒರಟಾಗಿ ಕತ್ತರಿಸಿದ ಗಾಜಿನ ಹೂಗಳ ಒಡ್ಯಾಣ.

ಪಾಶ್ಚಾತ್ಯ ದೇಶಗಳ ಹೂಗಳ ಕೆಟ್ಟ ಅನುಕರಣೆಗಳಾಗಿದ್ದವು. ಜೊತೆಗೆ ನಿಸರ್ಗ ಆ ಹೂಗಳಿಗೆ ಕೊಡದ ಬಣ್ಣಗಳನ್ನು ಬಳಿಯಲಾಗಿತ್ತು.... ಹೊರಗೆ ತೋಟದಲ್ಲಿ ಮಲ್ಲಿಗೆ, ಜಾಜಿಗಳು ಒಣಗುತ್ತಿದ್ದವು.

ಮನೆಯನ್ನು ಸಿಂಗರಿಸಲು ಅದರ ಒಡತಿ ಮಾಡಿದ ಪ್ರಯತ್ನಗಳನ್ನು ಕಂಡು ನಡುಗಿದ. ಎರಡನೆಯ ಖಾನಿಯನ್ನು ಪರೀಕ್ಷಿಸ

ತೊಡಗಿದ. ಆ ಖಾನಿಯಲ್ಲಿ ಯಜಮಾನನ ಕೈಯೂ ಇದ್ದಿತು. ಕಸೂತಿಯ ಪುಸ್ತಕಗಳ ಜೊತೆಗೆ ಎಂಜನಿಯರಿಂಗ್ ಪುಸ್ತಕಗಳು, ಪ್ರಣಯ ಕತೆಗಳು, ಪತ್ತೇದಾರಿ ಕಾದಂಬರಿಗಳು, ಮೂಲೆಯಲ್ಲಿ ಒಂದು ಫೋಟೋ ಆಲ್ಬಮ್.

ಮಿಕ್ಕ ಯಾವ ಪುಸ್ತಕಗಳಲ್ಲೂ ಆಸಕ್ತಿಯಿಲ್ಲದ್ದರಿಂದ ಚಿತ್ರ ಸಂಪುಟವನ್ನು ಕೈಗೆತ್ತಿಕೊಂಡು ಹಾಳೆಗಳನ್ನು ತಿರುವಿಹಾಕುತ್ತ ನಿಂತ. ಯಥಾಪ್ರಕಾರದ ಸಂಸಾರ ಚಿತ್ರಗಳು. ಅವ್ಯವಸಾಯಿ ಕ್ಯಾಮರಾ ದಿಂದ ಹೊರಬಂದ ಅಸ್ಪಷ್ಟ ಪ್ರತಿಬಿಂಬಗಳು, ನೆಮ್ಮದಿಯಿಲ್ಲದೆ ಮರ ವಾದ ಮುಖಗಳು, ಅಸಹಜ ಭಂಗಿಗಳಿಂದ ಬಿಗಿತುಕೊಂಡ ದೇಹ ಗಳು, ಬಿಸಿಲಿಗೆ ಮುದುಡಿದ ಗಂಡಸರ ಮುಖಗಳು, ಬಿಸಿಲನ್ನು ಲೆಕ್ಕಿ ಸದೆ ಸುಂದರ ಚಿತ್ರಕ್ಕಾಗಿ ಹಾತೊರೆದು ದೊಡ್ಡದಾಗಿ ನಗುತ್ತಿರುವ ಹೆಂಗಸರ ಮುಖಗಳು, ಅಭ್ಯಾಸವಿಲ್ಲದ ಬಟ್ಟೆಗಳ ಭಾರದಿಂದ ಕಂದಿದ ಮಕ್ಕಳ ಮುಖಗಳು........ ಕಪ್ಪು ಹೊದಾನಿಗಳಲ್ಲಿಟ್ಟಿದ್ದ ಕಾಗದದ ಹೂಗಳು ರಟ್ಟಿನ ಹಾಳೆಗಳು ಎಡ ಮಗ್ಗುಲಿಗೆ ಮಲಗುತ್ತ ಬಂದವು.

ಹಾಳೆಗಳನ್ನು ಮಗುಚುತ್ತಿದ್ದ ಬೆರಳು ಇದ್ದಕ್ಕಿದ್ದಂತೆ ಮರಗ ಟ್ಟಿತು. ತಡೆದುಬಂದ ಉಸಿರು ಚಿತ್ರವೊಂದನ್ನು ಮಸುಕಮಾಡಿತು. ಬೆಳಕು ಮೆಲ್ಲನೆ ಹಾಳೆಯ ತುದಿಯನ್ನು ಬಿಟ್ಟು ಬಂದು ಒದ್ದೆ ಮುಸು ಕನ್ನು ಒರೆಸಿತು. ಚಿತ್ರದಲ್ಲಿನ ಮುಖ ಮತ್ತೆ ಸ್ಪಷ್ಟವಾಗಿ ಕಾಣಲಾ ರಂಭಿಸಿತು.

ಯುವತಿಯೊಬ್ಬಳ ಚಿತ್ರವದು. ಸುಮಾರು ೨೩–೨೪ ವರ್ಷ ವಯಸ್ಸಿರಬಹುದು. ಸಾಂಪ್ರದಾಯಿಕ ದೃಷ್ಟಿಯಿಂದ ಚೆಲುವೆ ಎನ್ನಲು ಸಾಧ್ಯವಿರಲಿಲ್ಲ. ಅಗಲವಾದ ಒರಟು ಮುಖ. ಬಹಳ ತೆಳುವಲ್ಲದ ದೇಹ. ಆಡಂಬರರಹಿತವಾದ ಉಡಿಗೆ ತೊಡಿಗೆ. ಅತಿ ಸಾಮಾನ್ಯ ಎನ್ನಬಹುದಾದ ಮುಖ.

ಆದರೂ ಅತಿ ಅಸಾಮಾನ್ಯವಾದ ಮುಖ. ಮುಖದ ಗಾಂಭೀ

ರ್ಯವನ್ನು ಅಲೌಕಿಕವಾದ ಒಂದು ಕಳೆ ಬೆಳಗಿಸಿತ್ತು. ತುಟಿಯ ಮೇಲಿನ ಸೂಕ್ಷ್ಮ ನಗೆ ಕಣ್ಣಿನಲ್ಲೂ ಮನೆ ಮಾಡಿತ್ತು. ಒರಟು ರೇಖೆಗಳು ಮುಖವನ್ನು ತುಂಬಿದ್ದ ಮಾರ್ದವದಿಂದ ಮೃದುವಾಗಿದ್ದವು.

ಮನಶ್ಯಾಂತಿಯಿಂದ ನೇರವಾದ ಹುಬ್ಬುಗಳನ್ನು ಸ್ನೇಹದ ಆಸರೆಯನ್ನು ಸೂಚಿಸುತ್ತಿದ್ದ ಕಣ್ಣುಗಳು. ಪ್ರೇಮದ ಅಶ್ವಾಸನೆಯನ್ನು ಕೊಡುತ್ತಿದ್ದ ತುಟಿಗಳು.

ಅವನು ಹುಡುಕುತ್ತಿದ್ದ ಹೆಣ್ಣು! ವರ್ಷಗಳಿಂದ ಹುಡುಕುತ್ತಿದ್ದ ಹೆಣ್ಣು. ಇದುವರೆಗೆ ಒಮ್ಮೆಯೂ ಕಾಣಿಸದಿದ್ದ ಹೆಣ್ಣು!

ಹಾಳೆ ಮಗ್ಗುಲಾಯಿತು. ಹುಡುಗಿಯ ಕಣ್ಣುಗಳು ನೇರವಾಗಿ ಅವನನ್ನೇ ನೋಡುತ್ತಿದ್ದವು. ಲಜ್ಜೆಯ ಅರಿವೇ ಇಲ್ಲದ ಮುಗ್ಧತೆಯ ನೇರವಾದ ದೃಷ್ಟಿ.

ಅವನಲ್ಲಿ ಪ್ರಶ್ನೆಗಳ ಸುರುಳಿ ಬಿಚ್ಚಿತು: ಯಾರಿವಳು? ಹೆಸರೇನು?

ಚಿತ್ರವನ್ನು ಕಾಗದದ ಚೌಕಟ್ಟಿನಿಂದ ಬಿಡಿಸಿ ತಿರುಗಿಸಿದ. ಹಿಂದೆ ಏನೂ ಬರೆದಿರಲಿಲ್ಲ.

ಚೌಕಟ್ಟಿನಿಂದ ಹೊರಗೆಳೆದ ಚಿತ್ರವನ್ನು ತನ್ನೊಡನೆ ತೆಗೆದುಕೊಂಡು ಹೋಗಬಹುದೆ ಎಂದು ಅನುಮಾನಿಸುತ್ತಿರುವಷ್ಟರಲ್ಲಿ ಹಿಂದಿನಿಂದ ಕರೆ ಬಂತು. "ಏನು, ಒಬ್ಬರೇ ನಿಂತುಕೊಂಡುಬಿಟ್ಟಿದ್ದೀರಲ್ಲ?"

ಅವಸರದಿಂದ ಚಿತ್ರವನ್ನು ಚೌಕಟ್ಟಿನಲ್ಲಿ ಜೋಡಿಸಿ ಹಿಂತಿರುಗಿದ. ಮನೆಯ ಯಜಮಾನ ನಗುತ್ತ ನಿಂತಿದ್ದ.

ನಗಲು ಪ್ರಯತ್ನಿಸುತ್ತ ಉತ್ತರ ಕೊಟ್ಟ: "ಏನಿಲ್ಲ ಪುಸ್ತಕಗಳನ್ನು ನೋಡುತ್ತ ನಿಂತಿದ್ದೆ".... ಕೋಣೆಯ ಬೇರೆ ಪಾರ್ಶ್ವದಿಂದ ಇಬ್ಬರು ಸ್ನೇಹಿತರು ತಮ್ಮೆಡೆಗೆ ಬರುತ್ತಿದ್ದದನ್ನು ನೋಡಿ ಬೇಗ ಸೇರಿ

ಸಿದ : “ ಹಾಗೆಯೇ ಈ ಆಲ್ಬಮ್ ಸಿಕ್ಕಿತು. ನೋಡುತ್ತಿದೆ ....
ಅಂದ ಹಾಗೆ, ಈ ಚಿತ್ರ ಯಾರದು ? ”

“ ಅದೇ ? ನನ್ನ ಹೆಂಡತಿಯ ಸ್ನೇಹಿತೆ ಒಬ್ಬಳದು.... ಏಕೆ ? ”

“ ಏನಿಲ್ಲ ಸುಮ್ಮನೆ ಕೇಳಿದೆ.... ಎಲ್ಲೋ ನೋಡಿದಹಾಗಿತ್ತು!”

“ ನೋಡಿರಬಹುದು. ನನ್ನ ಹೆಂಡತಿಯೂ ಅವಳೂ ಕಾಲೇಜ
ನಲ್ಲಿ ಒಟ್ಟಿಗೆ ಓದಿದವರು. ಅವಳು ಮಂಗಳೂರಿನವಳು. ಹೆಸರು
ಶಾಂತಿ. ”

ಶಾಂತಿ ! ಮುಖಕ್ಕೆ ತಕ್ಕ ಹೆಸರು. ಶಾಂತಿಯನ್ನು ತುಂಬಿ
ಕೊಂಡಿರುವ ಮುಖ. ನೋಡಿದವರಿಗೆ ಶಾಂತಿಯನ್ನು ಕೊಡುವ
ಮುಖ. ಶಾಂತಿ !

ಗೆಳೆಯರು ಹತ್ತಿರ ಬಂದರು. ಮಾತು ಮತ್ತೆ ಪ್ರಾರಂಭವಾ
ಯಿತು. ಮಾತಿನಲ್ಲಿ ಆಸಕ್ತಿ ಇಲ್ಲದಾಗಿ, ಏನೋ ನೆವವನ್ನೊಡ್ಡಿ
ಮನೆಗೆ ಹೊರಟ.

* * * *

ಅಂದು ಮುಂಜಾನೆ ದಾರಿಯಲ್ಲಿ ಸಿಕ್ಕಿದ ಗೆಳೆಯನೊಬ್ಬ ಬಲ
ವಂತದಿಂದ ಇವನನ್ನು ತನ್ನ ಪರಿಚಯಸ್ಥರೊಬ್ಬರ ಮನೆಗೆ ಕರೆದೊ
ಯ್ದಿದ್ದ. ಅಲ್ಲಿ ಬೇಸರದಿಂದ ಆಕಳಿಸುತ್ತಿದ್ದವನಿಗೆ ಅನಿರೀಕ್ಷಿತವಾಗಿ
ಸಿಕ್ಕಿದ ಆ ಚಿತ್ರವನ್ನು ಬೇಸರಕ್ಕೆ ಕಾರಣರಾದವರ ಮಧ್ಯೆಯೇ ಬಿಟ್ಟು
ಬರಬೇಕಾಯಿತು.

ಚಿತ್ರ ಬೇರೆ ಮನೆಯಲ್ಲಿತ್ತು. ಆದರೆ ಮುಖದ ಪ್ರತಿಬಿಂಬ
ಅವನಲ್ಲಿ ನೆಲೆಸಿತ್ತು.

ಮನೆಯಲ್ಲಿ ಊಟ ಮಾಡುತ್ತಿದ್ದಾಗ ತಾಯಿ ಹೇಳಿದರು :
“ ಬೆಳಗ್ಗೆ ತುಮಕೂರಿನಿಂದ ಸುಬ್ಬರಾಯರು ಬಂದಿದ್ದರು, ಅವರ
ಮಗಳು ಗೌರೀನ ನಿನಗೆ ಕೇಳೋದಿಕ್ಕೆ. ನಿನಗೋಸ್ಕರ ತುಂಬಹೊತ್ತು
ಕಾದಿದ್ದರು. ಮತ್ತೆ ಸಂಜೆಗೆ ಬರ್ತಾರಂತೆ. ”

ಅವನು ಮಾತನಾಡಲಿಲ್ಲ. ತುಮಕೂರು— ಸುಬ್ಬರಾಯರು—ಗೌರಿ. ತನಗೆ !

ಮಗನ ಮೌನದಿಂದ ನಿರುತ್ಸಾಹಗೊಳ್ಳದೆ ತಾಯಿ ಮುಂದೆ ಹೇಳಿದರು : " ಸುಬ್ಬರಾಯರಿಗೆ ಮದುವೆಗೆ ಉಳಿದಿರೋಳು ಇವಳೊಬ್ಬಳೇ ಮಗಳು. ಚೆನ್ನಾಗಿ ಮದುವೆ ಮಾಡಿಕೊಡ್ತಾರೆ. ಹುಡುಗಿಗೆ ಈ ವರ್ಷ ಎಸ್. ಎಸ್. ಎಲ್. ಸಿ. ಪ್ಯಾಸ್ ಆಯಿತಂತೆ.... "

ಮಗ ಮುಂದುವರಿಸಿದ : " ಹುಡುಗಿ ಲಕ್ಷಣವಾಗಿದ್ದಾಳಂತೆ. ಮನೆ ಕೆಲಸ ಎಲ್ಲಾ ಅಚ್ಚುಕಟ್ಟಾಗಿ ಮಾಡ್ತಾಳಂತೆ. ಸಂಗೀತ ಕಲಿತಿದ್ದಾಳಂತೆ. ಅಲ್ಲವೆ, ಅಮ್ಮ ? "

ಮಗನ ಹಾಸ್ಯಕ್ಕೆ ತಾಯಿ ನಗಲಿಲ್ಲ. " ಯಾವಾಗಲೂ ಹೀಗೇ ತಮಾಷೆ ಮಾಡಿ ಬಿಡ್ತೀಯಪ್ಪ. ಯಾವ ಹೆಣ್ಣನ್ನೂ ಒಪ್ಪೋದಿಲ್ಲವಲ್ಲ ನೀನು ? "

" ಹೇಗೆ ಒಪ್ಪಲಮ್ಮ ? ಒಂದು ಜಡೆ, ರಿಬ್ಬನ್, ರಬ್ಬರ್ ಬಳೆ, ಕಪ್ಪು ಪಟ್ಟೆ ಚಪ್ಪಲಿ, ಯೋಚನೆ : ಸಿನಿಮಾ, ಪರೀಕ್ಷೆ, ಮದುವೆ ಮಾತಾಡಿಸಿದರೆ ಉತ್ತರ ಕೊಡೋದಕ್ಕೆ ಬರದೆ ನಾಚಿಕೆಯ ಸೋಗು ಹಾಕೋದು. ಹಾಡು ಎಂದರೆ ಅದಕ್ಕೂ ನಾಚಿಕೆ. ಕಡೆಗೆ ಬಲವಂತ ಮಾಡಿದ ಮೇಲೆ ಮೂರು ನಿಮಿಷದಲ್ಲಿ ಒಂದು ಕೀರ್ತನೆ ಹಾಡಿ ನಿಲ್ಲಿಸೋದು.... "

" ಇನ್ನು ಹೇಗಿರಬೇಕು ಹೇಳು ಹುಡುಗಿಯರು ? ಅದೇನು ನಿಮ್ಮ ಸಾಹಿತಿಗಳ ಕಲ್ಪನೆಯೋ ? ನಿನಗೆ ಎಂತಹ ಹೆಣ್ಣು ಬೇಕೋ ನನಗಂತೂ ಗೊತ್ತಿಲ್ಲಪ್ಪ. "

ನಕ್ಕು ಕೈತೊಳೆಯಲು ಎದ್ದು ಹೋದ.

* * * *

ತನಗೆ ಎಂತಹ ಹೆಣ್ಣು ಬೇಕೆಂದು ತಾಯಿಗೆ ಹಿಂದೆಯೇ ಹೇಳಿದ್ದ : ಒಂದು ದಿನ ರಾತ್ರಿ ಊಟವಾದ ಮೇಲೆ ಎಲ್ಲರೂ ವರಾಂಡದಲ್ಲಿ ಕುಳಿತಿದ್ದರು. ತಂದೆ ಪತ್ರಿಕೆಯನ್ನೋದುತ್ತಿದ್ದರು. ತಾಯಿ

ಆಗ ತಾನೆ ಮಗನಿಗೆ ಬುದ್ಧಿವಾದ ಹೇಳಿ ಮುಗಿಸಿದ್ದರು. ಆಗ ರೇಡಿಯೋದಿಂದ ಡೆಲಿಯಸ್ ನ ವೈಯಲಿನ್ ಕಾಂಚೆರ್ಟೋ ಕೇಳಿ ಬಂತು. ಅದು ಮುಗಿದ ಮೇಲೆ ತಾಯಿಗೆ ಹೇಳಿದ : "ಇಂತಹ ಹುಡುಗಿಯನ್ನು ಹುಡುಕಿಕೊಂಡು ಮದುವೆಯಾಗುತ್ತೇನೆ !" ತಾಯಿಗೆ ಅರ್ಥವಾಗದೆ ಸುಮ್ಮನಾಗಿದ್ದರು.

ಅಂತಹ ಹುಡುಗಿ ! ಚೆಲುವೆ, ಹಸನ್ಮುಖಿ. ಉಲ್ಲಾಸಭರಿತ ಆದರೆ ಗಂಭೀರ ಮುಖಭಾವ. ಯುವತಿ, ಆದರೆ ಜ್ಞಾನಿ, ವಿವೇಕಿ ವಿವೇಚನಶಾಲಿ; ಅಕೃತಕವಾದ, ಸಂಪೂರ್ಣವಾಗಿ ನೈಜವಾದ, ಮನಮೋಹಕ ನಡೆವಳಿಕೆ; ವಿಚಾರಶೀಲ, ಆಲೋಚನಾಪರ, ಶ್ರದ್ಧಾಯುಕ್ತ ಆದರೆ ಅರ್ಥವಿಲ್ಲದ ಶಿಷ್ಟಾಚಾರ, ಸಂಪ್ರದಾಯಗಳನ್ನು ಲೆಕ್ಕಿಸದ ಮನಸ್ಸು; ಮಿಕ್ಕವರನ್ನೂ ಉತ್ತಮಗೊಳಿಸುವ ಉದಾರ, ಉದಾತ್ತ ನೀತಿ, ಧ್ಯೇಯಗಳು, ಉತ್ತಮ ಶೀಲ, ಸ್ವಭಾವಗಳು; ಅನಂತವಾದ ಮಮತೆಯುಳ್ಳ, ಕೋಮಲ, ದಯಾರ್ದ್ರ ಹೃದಯ; ಗಾಢಾನುರಕ್ತೆ : ಚಂಚಲೆ ಆದರೆ ವಿಶ್ವಾಸ ಪಾತ್ರೆ, ಸೂಕ್ಷ್ಮಬುದ್ಧಿಯ ವಾಕ್ಚತುರೆ.... ಅಸಾಧ್ಯಾದರ್ಶ !

ಅಂತಹ ಹುಡುಗಿ ! ಇವೆಲ್ಲ ಗುಣಗಳು ತನ್ನಲ್ಲಿವೆಯೆಂದು ನಮ್ರತೆಯಿಂದ ಸೂಚಿಸುತ್ತಿತ್ತು ಶಾಂತಿಯ ಮುಖ. ಹಿಂದೆಂದೋ ಶುಕ್ಲನ 'ಕಲಾವಿದನ ಪತ್ನಿ' ಚಿತ್ರವನ್ನು ನೋಡಿ ಅಂದುಕೊಂಡಿದ್ದ. ಎಂತಹ ಮುಖ ! ಇದರಿಂದ ಪಡೆದ ಸ್ಫೂರ್ತಿಯಿಂದ ಇದರ ವಿಷಯವಾಗಿ ಒಂದು ಕಾದಂಬರಿಯನ್ನು ಬರೆಯಬಹುದು.... ಬರೆಯಬೇಕು !.... ಎಂತಹ ಹುಡುಗಿ !........ ಜೊತೆಗಾರ ತನ್ನ ಯೋಚನೆಗಳನ್ನು ವಿವರಿಸಿದಾಗ ಅವುಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾಳೆ. ಅರ್ಥವಾಗದಿದ್ದರೆ ಅವುಗಳನ್ನು ತಿರಸ್ಕರಿಸತೊಡಗುವುದಿಲ್ಲ.... ಸಹನೆ, ತಾಳ್ಮೆ, ವಿನಯ, ಆದರ, ಅವನಲ್ಲಿ ಅಪಾರ ಶ್ರದ್ಧೆ, ಅವನ ಬಗ್ಗೆ ಗೌರವ ಅವಳಲ್ಲಿರುತ್ತವೆ. ಧನಲೋಭ, ಮುಂಗೋಪ,

ಸಂಕುಚಿತ ಮನೋಭಾವ, ಸಂಶಯ ಪ್ರಕೃತಿ ಅವಳದಾಗಿರರುವುದಿಲ್ಲ... ಸಂಗಡಿಗನ ಮನಸ್ಸು, ಸ್ವಭಾವಗಳನ್ನು ಅರ್ಥ ಮಾಡಿಕೊಂಡು ಅವನ ಸುಖದ, ಮನಸ್ವಾಸ್ಥ್ಯದ ಕಡೆಗೆ ಲಕ್ಷ್ಯಕೊಟ್ಟು, ಅವನ ನಡೆವಳಿಕೆಯನ್ನು ಎಂದೂ ತಪ್ಪು ತಿಳಿಯದೆ, ಯಾವಾಗಲೂ ಸಂತೃಕ್ಕೆ ಸಮಾಧಾನ, ಪ್ರೋತ್ಸಾಹ, ಆಸರೆ, ಹಾರೈಕೆಗಳನ್ನು ಹೊಂದಿರುತ್ತಾಳೆ.... ಒಟ್ಟಿನಲ್ಲಿ, ಕಲಾವಿದನಿಗೆ ತಕ್ಕ ಹೆಂಡತಿ !.... ಈಗ ಆ ಚಿತ್ರ ಜೀವವನ್ನು ತಳೆದು ಬಂದಿತ್ತು. ಅದರ ಮೇಲೆ ಅವನು ಕಟ್ಟಿದ್ದ ಕನಸು ಭೂಮಿಗಿಳಿದು ಬಂದಿತ್ತು !

ಇಂತಹ ಹುಡುಗಿ ! ತಾಯಿ ತೋರಿಸುವ ಹುಡುಗಿಯರು ಅತಿ ಅನಾಕರ್ಷಣೀಯರು. ಆಕೆಯ ಬಲವಂತದಿಂದ ಇಬ್ಬರು ಮೂವರು ಹೆಣ್ಣುಗಳನ್ನು ನೋಡಲು ಹೋಗಿದ್ದ. ನಾಚಿ, ತಲೆಯನ್ನೇ ಮೇಲಕ್ಕೆತ್ತದವಳೊಬ್ಬಳು; ಸ್ವಲ್ಪವೂ ನಾಚಿಕೆಯಿಲ್ಲದೆ, ಇವನನ್ನೇ ದಿಟ್ಟಿಸಿ ನೋಡಿ ನಕ್ಕವಳೊಬ್ಬಳು... ಮನೆಗೆ ಬಂದು ಬೇಸರ ಪಟ್ಟಿದ್ದ; ತಾಯಿಯನ್ನೂ ಬೇಸರ ಪಡಿಸಿದ್ದ.

ಆದರೂ ತಾಯಿ ತಮ್ಮ ಮಾತನ್ನು ನಿಲ್ಲಿಸಿರಲಿಲ್ಲ. ಸೂಚನೆ, ಸಲಹೆ, ಒತ್ತಾಯಗಳು ಅವರಿಂದ ಬರುತ್ತಲೇ ಇದ್ದವು. ರಾಗ ಯಾವುದೇ ಆಗಿರಲಿ ಪಲ್ಲವಿ ಒಂದೇ : ' ಮದುವೆ ಮಾಡಿಕೊಳ್ಳಪ್ಪ!'

* * * *

ಶಾಂತಿ ! ಅವಳ ಅನ್ವೇಷಣೆ ನಡೆಯಿತು. ಫಲವಿಲ್ಲದಿದ್ದರೂ ಆಸೆ ಆಳವಾಗುತ್ತ ಬಂತು. ಆಶೆಯ ತಳಹದಿಯ ಮೇಲೆ ಸ್ವಪ್ನಸೌಧ ಬೆಳೆಯುತ್ತ ಹೋಯಿತು. ತಾಯಿಯ ತಾಳ್ಮೆಯಿಲ್ಲದ ಮಾತುಗಳನ್ನು ಕೇಳಿ ಅಂದುಕೊಂಡ. ' ಹೆಂಗಸಿಗೆ ಜೀವನದಲ್ಲಿ ಎರಡು ಮಹತ್ವಾಕಾಂಕ್ಷೆಗಳಿರುತ್ತವೆ : ಒಂದು ತಾನು ಮದುವೆಯಾಗುವುದು, ಇನ್ನೊಂದು ತನ್ನ ಮಗನಿಗೆ ಮದುವೆ ಮಾಡಿಸುವುದು ! ' ತಾಯಿಯ ಆತುರದ ಪ್ರಶ್ನೆಗೆ ನಗುತ್ತ ಉತ್ತರವಿತ್ತ : ' ಸ್ವಲ್ಪ ತಡಿ, ಅಮ್ಮ '.

ಮಗನ ಉತ್ಸುಕಿತ ನಗುಮುಖವನ್ನು ನೋಡಿ ತಾಯಿಗೆ ಸ್ವಲ್ಪ ಸಮಾಧಾನವಾಯಿತು.

ಅನ್ವೇಷಣೆ-ಸಾಗಿತು. ಕನಸುಗಳು ಬೆಳೆದವು. ಶಾಂತಿ!.... ' ಕಾಫಿ ಚೆನ್ನಾಗಿದೆ ', ಎಂದರೆ ಅವಳು ಮಿಕ್ಕ ಹೆಂಗಸರಂತೆ ಕಣ್ಣಿವೆಗಳನ್ನು ಕುಣಿಸಿ, ಇನ್ನೂ ಹೆಚ್ಚಿನ ಹೊಗಳಿಕೆಯ ಆಶೆಯಿಂದ, ' ಹೌದೇನು ? ' ಎಂದು ಕೇಳುವುದಿಲ್ಲ. ಬದಲು, ಮೃದುವಾಗಿ ನಕ್ಕು, ( ಆ ವಿಶಿಷ್ಟವಾದ ನಗು ! ತುಟಿಯಲ್ಲಿ ಮಾತ್ರವಲ್ಲದೆ ಕಣ್ಣಿನಲ್ಲೂ ಮೂಡುವ ನಗು !), 'ನಿಮಗಿಷ್ಟವಾಯಿತೇನು ? ಸಂತೋಷ ', ಎನ್ನುತ್ತಾಳೆ !.... ಜಲತಾಪದ ಬಳಿ ಬಂದಾಗ, ಅವನು ಏಕಾಂತತೆಯನ್ನು ಬಯಸುತ್ತಾನೆ ಎಂದು ಅರಿತು, ಏನೋ ನೆವವನ್ನು ಹೇಳಿ ಮನೆಗೆ ಹೋಗುತ್ತಾಳೆ. ಅವನು ಜಲರಾಶಿಯ ಸೌಂದರ್ಯದಲ್ಲಿ ಮನಸ್ಸನ್ನು ಮುಳುಗಿಸಿ, ಅದರ ಅದ್ಭುತ ವಿನ್ಯಾಸಗಳನ್ನು ಮೆಚ್ಚಿ, ಅದರ ಸ್ನೇಹಾಲಿಂಗನದಿಂದ ಆನಂದಪಟ್ಟು ಉಲ್ಲಾಸದಿಂದ, ದಣಿವಿನಿಂದ ಮನೆಗೆ ಮರಳಿದಾಗ ನಗು ಮುಖದಿಂದ ಸ್ವಾಗತಿಸುತ್ತಾಳೆ.... ಅವನು ಆರಾಧಿಸುವ ಕಲೆಯ ಬಗೆಗೆ ಅವಳಲ್ಲಿ ಮತ್ಸರವಿರುವುದಿಲ್ಲ. ಅವನಿಗೆ ಉತ್ಕಟಾನಂದವನ್ನು ಕೊಡುವ ಸೌಂದರ್ಯದ ಪ್ರಕಾಶಗಳ ಬಗೆಗೆ ಅಸೂಯೆಯಿರುವುದಿಲ್ಲ. ಬದಲು, ಅವನ ಆರಾಧನಾವಸ್ತು ಎಂದು ಕಲೆಯ ಬಗೆಗೆ ಪೂಜ್ಯಭಾವ ಇರುತ್ತದೆ. ಅವನ ಆನಂದಾನುಭವಕ್ಕೆ ಕಾರಣವಾದ ವಸ್ತುಗಳ ಬಗೆಗೆ ಕೃತಜ್ಞತೆ ಇರುತ್ತದೆ........ ಏಕಾಂತತೆಯ ಭಯ ಅವಳಿಗಿರುವುದಿಲ್ಲ. ಆದ್ದರಿಂದ ಸಾವಿನ-ಅವನದಾಗಲಿ, ಅವಳದಾಗಲಿ ಭಯ ಅವಳಲ್ಲಿರುವುದಿಲ್ಲ.. ಅವನ ಒಲವಿನಲ್ಲಿ ನಂಬಿಕೆ ಇಟ್ಟಿರುವುದರಿಂದ ಅವನ ಬಗೆಗೆ ಒರಟು ಸ್ವಾಮ್ಯತನ ಇರುವುದಿಲ್ಲ ಇದರಿಂದ ಇಬ್ಬರಲ್ಲಿ ವಿರಸವಿರುವುದಿಲ್ಲ.... ಅವನ ಪ್ರತಿಭೆಯನ್ನು ಗುರುತಿಸಿ, ಅದರ ಹಿರಿಮೆಯನ್ನು ಒಪ್ಪಿ ನಡೆಯುವುದರಿಂದ ಅವಳಲ್ಲಿ ನೈಚ್ಯ ಭಾವ ಅಡಗಿರುವುದಿಲ್ಲ. ಅದರ ನೂರು

ಎಳೆಯ ವಿಷದುಸಿರು ಸಂಸಾರವನ್ನು ಸುಡುವುದಿಲ್ಲ.... ಭೂಮಿಯ ಮೇಲೆ ಅವನೊಡನೆ ನವಿಲಾಗಿ ನಲಿಯಲು ಸಿದ್ಧಳಾಗಿರುತ್ತಾಳೆ.... ಆಕಾಶದಲ್ಲಿ ಅವನೊಡನೆ ಹಕ್ಕಿಯಾಗಿ ಹಾರಲು ಸಿದ್ಧಳಿರುತ್ತಾಳೆ. ಸಮುದ್ರ ತೀರದಲ್ಲಿ ಅವನ ಕೈಗೆ ತನ್ನ ಕೈ ಕೂಡಿಸಲು ಹಿಂದೆಗೆಯುವುದಿಲ್ಲ. ಕಾಮನಬಿಲ್ಲು ಕೈಗೆ ಎಟುಕುವ ಉನ್ನತ ಪರ್ವತದ ಮೇಲೆ ದೃಷ್ಟಿಗೆ ದೃಷ್ಟಿ ಜೋಡಿಸಲು ಹಿಂಜರಿಯುವುದಿಲ್ಲ.... ಅವನು ಕೋರಿದರೆ ಅಡವಿಯಲ್ಲಿ ಮನೆ ಮಾಡುತ್ತಾಳೆ, ಮಧ್ಯ ರಾತ್ರಿಯಲ್ಲಿ ಎದ್ದು ಹಾಡುತ್ತಾಳೆ, ಸರೋವರದ ದಡದ ಮೇಲೆ ನರ್ತಿಸುತ್ತಾಳೆ.... ಅವನಿಗಾಗಿ ಅವಳು ಗುಲಾಬಿ ಹೂ ಆಗುತ್ತಾಳೆ, ವೀಣೆ ಆಗುತ್ತಾಳೆ. ನಕ್ಷತ್ರ ಆಗುತ್ತಾಳೆ.... ಅವಳೊಂದಿಗೆ ಜೀವನ ವಾಲ್ಸ್ ನೃತ್ಯವಾಗುತ್ತದೆ.... ಶಾಂತಿ, ಓ, ಶಾಂತಿ !

* * * *

ಹತ್ತಿರದ ಊರೊಂದಕ್ಕೆ ಯಾವುದೋ ಸಮ್ಮೇಲನಕ್ಕಾಗಿ ಅವನು ಹೋಗಬೇಕಾಗಿ ಬಂತು. ಸಮ್ಮೇಳನದ ಕಡೆಯ ದಿನ, ಊರಿನ ಗಣ್ಯ ಮಹನೀಯರೊಬ್ಬರ ಆಮಂತ್ರಣದ ಮೇರೆಗೆ ಗೆಳೆಯರೊಡನೆ ಅವನ ಮನೆಗೆ ಹೋಗಿದ್ದ. ಆತ ಊರಿನ ಪ್ರಸಿದ್ಧ ವ್ಯಾಪಾರಿ. ಹತ್ತಿಬಟ್ಟೆ ಮಾರಿ ಬಂದ ಹೇರಳವಾದ ಲಾಭದಲ್ಲಿ ಶೇಕಡಾ ಒಂದೂವರೆ ಅಂಶವನ್ನು ದಾನ ಮಾಡಿ ಉದಾರಿ ಎಂದು ಹೆಸರು ಪಡೆದಿದ್ದ. ಹಣವನ್ನು ಪಡೆದವರಿಂದ, ಪಡೆದವರ ಮೂಲಕ ಅನೇಕ ಉದ್ದದ ಬಿರುದುಗಳನ್ನು ಗಳಿಸಿದ್ದ. ಪತ್ರಿಕೆಗಳಲ್ಲಿ ಹೆಸರು ಬಂದ ವ್ಯಕ್ತಿಗಳು ಊರಿಗೆ ಭೇಟಿ ಕೊಟ್ಟಾಗ ಅವರನ್ನು ತನ್ನ ಮನೆಗೆ ಕರೆತಂದು, ಅವರಿಗೆ ಊಟ ಹಾಕಿಸುವುದೆಂದರೆ ಆತನಿಗೆ ಬಲು ಸಂಭ್ರಮ.

ವ್ಯಾಪಾರಿಯ ಜಂಭದ ಮಾತುಗಳು, ಅತಿ ವಿನಯದ ಪ್ರದರ್ಶನ, ಸಂಗಡಿಗರಲ್ಲಿ ಕೆಲವರು—ಯಾವು ಯಾವುದೋ ಸಂಸ್ಥೆಗಳ ಕಾರ್ಯದರ್ಶಿಗಳು—ಆತನಿಂದ ಹಣ ಸೆಳೆಯಲು ಬಳಸುತ್ತಿದ್ದ ಹೊಗಳಿಕೆ, ಇವುಗಳಿಂದ ಬೇಸರಗೊಂಡು, ಗೋಡೆಯ ತುಂಬ ತೂಗು

ಹಾಕಿದ್ದ ಛಾಯಾ ಚಿತ್ರಗಳನ್ನು ನೋಡುತ್ತ ನಿಂತ : ವಾಣಿಜ್ಯ ಸಂಸ್ಥೆ ಗಳ ಸದಸ್ಯರ ಗುಂಪುಗಳು; ಮಧ್ಯದಲ್ಲಿ ಕುಳಿತ ವ್ಯಾಪಾರಿಯ ಕತ್ತಿನ ಸುತ್ತ ದಿಂಡು ಹಾರಗಳು. ಆತನ ತಂದೆ, ತಾಯಿಯರ ಅಸ್ಪಷ್ಟ ಚಿತ್ರಗಳು. ಮನೆಯವರೆಲ್ಲರೂ ಕುಳಿತ ಒಂದು ಚಿತ್ರ. ಅದರ ಪಕ್ಕಕ್ಕೆ–! ಅವನಿಗೆ ಕಣ್ಣು ಮುಚ್ಚಿಕೊಳ್ಳಬೇಕೆನಿಸಿತು. ಕೋಣೆಯಿಂದ ಹೊರಗೆ ಓಡಿಹೋಗಬೇಕೆನಿಸಿತು. ಆದರೆ ದೂರ ಸರಿದು ನಿಂತ ರೆಪ್ಪೆಗಳ ನಡು ನಿನಿಂದ ನೇರವಾಗಿ ಹೊರಬಂದ ದೃಷ್ಟಿ ಚಿತ್ರವನ್ನು ಬಿಟ್ಟು ಕದಲ ಲಿಲ್ಲ. ನೆಲದ ಮೇಲೆ ಊರಿದ ಕಾಲುಗಳು ನೆಲವನ್ನು ಬಿಟ್ಟು ಅಲು ಗಲಿಲ್ಲ.

ಚಿತ್ರದಲ್ಲಿ ಶಾಂತಿ ! ಶಾಂತಿ. ನಿಸ್ಸಂದೇಹವಾಗಿ ಶಾಂತಿ. ಅವಳ ಪಕ್ಕದಲ್ಲಿ ಒಬ್ಬ ಗಂಡಸು ! ಶಾಂತಿಯ ಮೈಯನ್ನು ದೊಡ್ಡ ಅಂಚಿನ ಕಲಾಪತ್ತಿನ ಸೀರೆ ಅಗಲವಾಗಿ ಮಾಡಿತ್ತು. ಚಿನ್ನದ ಆಭರಣಗಳು ಭಾರ ಮಾಡಿದ್ದವು; ಕೊರಳನ್ನು ಸುತ್ತಿನ ವಜ್ರದ ಸಾಲು ಮುಖದ ಕಳೆಯನ್ನು ಮರೆಸಿತ್ತು; ಸ್ಟುಡಿಯೊ ಫೋಟೋಗ್ರಾಫರನ ಆಜ್ಞೆಯ ಮೇರೆಗೆ ತುಟಿಗಳು ಬಿಗಿ ನಗುವಿನ ರೂಪದಲ್ಲಿ ತೆರೆದಿದ್ದವು. ಶಾಂತಿ ಶಾಂತಿಯಾಗಿರಲಿಲ್ಲ; ಒಂದು ಸಾಮಾನ್ಯ ಮದುವೆ ಹೆಣ್ಣಾಗಿದ್ದಳು. ಅವಳ ಪಕ್ಕದಲ್ಲಿದ್ದ ಗಂಡಸು ಡಬ್ಬಲ್ ಬ್ರೆಸ್ಟ್ ಸೂಟನ್ನು ಧರಿಸಿ ಮದುವೆ ಗಂಡಿನ ಬಿಗುವಿನಿಂದ ನಿಂತಿದ್ದ. ಶ್ರೀಮಂತ ವ್ಯಾಪಾರಿಯ ಮಗನೆಂದು ಸಾರಿ ಹೇಳುತ್ತಿದ್ದ ಮುಖ ಲಕ್ಷಣ : ದಪ್ಪ ಮುಖದಲ್ಲಿ ದಪ್ಪ ಮೀಸೆ, ಬಾಯಿ, ಮೂಗು, ಕಣ್ಣು, ಹುಬ್ಬುಗಳು, ಎಣ್ಣೆಯಿಂದ ಮಿನುಗುತ್ತಿದ್ದ ದಟ್ಟವಾದ ತಲೆ ಕೂದಲು, ವಜ್ರದುಂಗುರ, ದೊಡ್ಡ ಕೈ ಗಡಿಯಾರ.

ಮಂಕಾದ ಕಣ್ಣುಗಳಿಂದ ಚಿತ್ರವನ್ನು ಪರಿಶೀಲಿಸುತ್ತಿದ್ದಾಗ ವ್ಯಾಪಾರಿಯ ಹುರುಪಿನ ಧ್ವನಿ ಕೇಳಿ ಬಂತು : “ ಏನು, ಒಬ್ಬರೇ ನಿಂತುಕೊಂಡು ಬಿಟ್ಟಿದ್ದೀರಲ್ಲ ? ”

ನಗಲು ಪ್ರಯತ್ನಿಸುತ್ತ ಉತ್ತರ ಕೊಟ್ಟ : ' ಏನಿಲ್ಲ, ಚಿತ್ರಗಳನ್ನು ನೋಡುತ್ತ ನಿಂತಿದ್ದೆ. '

ಮುಂದೆ ಬಂದು ಉತ್ಸಾಹದಿಂದ ವಿವರಿಸತೊಡಗಿದ. ' ಇದು ನನ್ನ ಮಗನ ಮದುವೆ ಫೋಟೋ ೫-೬ ತಿಂಗಳ ಕೆಳಗೆ ಮದುವೆ ಆಯಿತು. ಈಗ ಅವನು ದೀಪಾವಳಿಗೋಸ್ಕರ ಮಾವನ ಮನೆಗೆ ಹೋಗಿದ್ದಾನೆ. ಮಾವನ ಮನೆ ಇರೋದು ಮಂಗಳೂರಿನಲ್ಲಿ. ಅವರೂ ವ್ಯಾಪಾರಿಗಳು. ಹಿಂದಿನಿಂದಲೂ ನಮಗೆ ಪರಿಚಯಸ್ಥರು. ಹುಡುಗಿಯ ಹೆಸರು ಮೊದಲು ಶಾಂತಿ ಅಂತಿತ್ತು. ಮದುವೆ ಆದ ಮೇಲೆ ರುಕ್ಮಿಣಿ ಅಂತ ಬದಲಾಯಿಸಿದೆವು. ನನ್ನ ಮಗನ ಹೆಸರು ಕೃಷ್ಣ ರಾವ್ !.... ಬಹಳ ಒಳ್ಳೆಯ ಹುಡುಗಿ. ಗುಣ, ನಡತೆ....

*

ರಾತ್ರಿ ತಾಯಿಗೆ ಕಾಗದ ಬರೆದ— ' ಅಮ್ಮ, ನಿನಗೆ ಇಷ್ಟ ಬಂದ ಹುಡುಗಿಯನ್ನು ಆರಿಸು; ನಾನು ಮದುವೆಯಾಗುತ್ತೇನೆ. ನನ್ನ ಆಯ್ಕೆ ನನಗೇ ಬೇಸರ ಬಂದಿದೆ.... ''

# ನನಗೊಂದು ಬಿಳಿ ಗುಲಾಬಿ

ಪಕ್ಕದ ಕೋಣೆಯ ಹುಡುಗಿ ಕಿಟಕಿಯಲ್ಲಿ ಮುಖವಿಟ್ಟು ಕೂಗಿದಳು : ' ಇನ್ನೊಂದು ಗಂಟೆಯಲ್ಲಿ ಸಿದ್ಧವಾಗಿರು; ರಮಾ. ಇಬ್ಬರೂ ಒಟ್ಟಿಗೆ ಹೋಗೋಣ. '

ವಿಮನಸ್ಕಳಾಗಿ ಉತ್ತರಿಸಿದಳು. ' ಹೂ. '

ಮಧ್ಯಾಹ್ನದ ಹೊತ್ತಾದ್ದರಿಂದ ಹಾಸ್ಟಲಿನಲ್ಲಿ ಹೆಚ್ಚು ಹುಡುಗಿಯರಿರಲಿಲ್ಲ. ಇದರಿಂದ ಬಿಸಿಲು ಎಷ್ಟೋ ಕಡಿಮೆಯಾಗಿದ್ದಂತೆನಿಸುತ್ತಿತ್ತು. ಆದರೂ ಒಲು ಸೆಕೆ. ಮುಂಗಾರು ಮೊದಲಾಗುವವರೊಳಗೆ ಆದಷ್ಟು ಕಿಚ್ಚು ಹಬ್ಬಿಸಬೇಕು ಎಂಬ ದೃಢ ಉದ್ದೇಶವನ್ನು ಸೂರ್ಯ ಹೊಂದಿದ್ದ. ಅವಳಿಗೆ ತಂಪಿನ ಆವಶ್ಯಕತೆ ಇತ್ತು. ಸೆಕೆಯಲ್ಲಿ ಚಿಂತನೆ ಬೆಣ್ಣೆಯ ಮುದ್ದೆಯಾಗುತ್ತಿತ್ತು. ಉರಿಯಲ್ಲಿ ನಿಂತು ಪ್ರಶ್ನೆ ಪತ್ರಿಕೆಯನ್ನು ಎದುರಿಸಲಾಗುತ್ತಿರಲಿಲ್ಲ. ವಾರದಿಂದ ಉತ್ತರವನ್ನು ಮುಂದೂಡಿಕೊಂಡು ಬಂದಿದ್ದಳು. ಇನ್ನೂ ಮುಂದೆ ಹಾಕುವುದು ಸಾಧ್ಯವಿರಲಿಲ್ಲ.

ಸಿಟ್ಟುಸಿರಿಟ್ಟು ಮೇಜಿನ ಮೇಲಿನ ಕಾಗದದ ಕಡೆ ನೋಡಿದಳು. ಓರ್ವ ಸಾಮಾನ್ಯ ಪ್ರೇಮಪತ್ರ. ವಾರದ ಹಿಂದೆ ಅವಳ ಕೈಸೇರಿತ್ತು. ವಾರದ ಅಶಾಂತಿಗೆ ಕಾರಣವಾಗಿತ್ತು.

ವಿಶ್ವನಾಥ ಆವಳಿಗೆ ದೂರದ ಸಂಬಂಧ. ಮನೆಯಲ್ಲೆಲ್ಲರಿಗೂ ಪರಿಚಯಸ್ಥ. ಒಳ್ಳೆಯ ಮನೆತನದ ಹುಡುಗ, ಸುರೂಪಿ, ಗುಣವಂತ. ಮೇಲಾಗಿ ಒಳ್ಳೆಯ ಕೆಲಸ ಸಿಕ್ಕಿ ಊರು ಬಿಟ್ಟು ಹೋದವನು. ಎಂದೋ ತಂದೆತಾಯಿಯ ದೂರಾಲೋಚನೆಯ ದೃಷ್ಟಿಯಲ್ಲಿ ಒಂದು ಭದ್ರವಾದ ಸ್ಥಾನ ಅವನಿಗಾಗಿ ಕಾದಿಡಲ್ಪಟ್ಟಿತ್ತು.

ಅವಳ ಜೀವನದಲ್ಲೂ ಅವನು ಒಂದು ಮುಖ್ಯ ಭಾಗವಾಗಿದ್ದ ಕಾಲವಿತ್ತು. ಅವರಿಬ್ಬರೂ ಒಂದೇ ಊರಿನಲ್ಲಿದ್ದಾಗಂತೂ ಅವನೇ ತನ್ನ ಜೀವನ ಎಂದು ತಿಳಿದಿದ್ದಳು. ಓದಿಗಾಗಿ ಊರನ್ನು ಬಿಟ್ಟು ಹಾಸ್ಟಲಿನಲ್ಲಿರಲು ಬರಬೇಕಾದಾಗ ಬರಲಾರದೆ ಬಂದಿದ್ದಳು. ವಾರದಲ್ಲಿ ಸೋಮವಾರ—ಅವನಿಂದ ಕಾಗದ ಬರುವ ದಿನ—ಅವಳಿಗೆ ಅತ್ಯಂತ ಪ್ರಿಯವಾದ, ಅತ್ಯಂತ ಮಹತ್ವದ ದಿನವಾಗಿತ್ತು.

ವಾರದ ಹಿಂದಿನ ಅವನ ಕಾಗದ ಸ್ವಲ್ಪ ಆಶ್ಚರ್ಯಕರವಾಗಿತ್ತು. ಸ್ವಲ್ಪ ಮಾತ್ರ. ಅವನು ಕೇಳಿದ ಪ್ರಶ್ನೆ ಅನಿರೀಕ್ಷಿತವಾದದ್ದೇನೂ ಅಲ್ಲ. ಆದರೆ ಅವನ ಬಗೆಗೆ ಯೋಚಿಸುವ ಪದ್ಧತಿ ಬಿಟ್ಟು ಹೋಗಿದ್ದರಿಂದ ಪ್ರಶ್ನೆ ಆಶ್ಚರ್ಯವನ್ನುಂಟು ಮಾಡಿತ್ತು. ಇನ್ನೊಬ್ಬನ ವಿಷಯವಾಗಿ ಚಿಂತಿಸುವ ರೂಢಿ ಬೆಳೆದು ಬಂದದ್ದರಿಂದ ಪ್ರಶ್ನೆ ಅಶಾಂತಿಯನ್ನುಂಟು ಮಾಡಿತ್ತು. ರಘುವೀರನ ಪರಿಚಯವಾಗಿರದಿದ್ದರೆ ವಿಶ್ವನಾಥನ ಪ್ರಶ್ನೆಗೆ ಉತ್ತರವನ್ನು ಸುಲಭವಾಗಿ ಕೊಡಬಹುದಾಗಿತ್ತು, ತಕ್ಷಣವೇ ಕೊಡಬಹುದಾಗಿತ್ತು. ಆದರೆ ರಘುವೀರನ ಪರಿಚಯವಾಗಿತ್ತು. ಎಂದೇ ಕಾಗದವನ್ನೋದಿ ವಾರವಾದರೂ ಉತ್ತರದ ರೂಪ ಇನ್ನೂ ಅಸ್ಪಷ್ಟವಾಗಿತ್ತು.

ಪ್ರಾರ್ಥನೆಯ ಕೋಣೆಯ ಗಡಿಯಾರ ಒಂದು ಹೊಡೆಯಿತು. ಮೂರೂವರೆ ಗಂಟೆ. ಐದು ಗಂಟೆಗೆ ಕಾಲೇಜಿನಲ್ಲಿ ಚರ್ಚಾಕೂಟವೊಂದನ್ನು ಏರ್ಪಡಿಸಲಾಗಿತ್ತು. ರಘುವೀರ ಅದರಲ್ಲಿ ಭಾಗವಹಿಸುತ್ತಾನೆಂದು ಗೊತ್ತಾಗಿತ್ತು. ಅವಳನ್ನು ಭಾಗವಹಿಸೆಂದು ಅವನು ಕೇಳಿರಲಿಲ್ಲ. ಎರಡು ಮೂರು ತಿಂಗಳುಗಳ ಕೆಳಗೆ ಕಾಲೇಜಿನ ಸಮಾರಂಭಗಳಲ್ಲಿ ಭಾಗವಹಿಸಲು ಎಷ್ಟು ಆಗ್ರಹ ಮಾಡುತ್ತಿದ್ದ!

ನಿಟ್ಟುಸಿರು ಕಾಗದದ ಹಾಳೆಗಳನ್ನು ಪಟ ಪಟ ಹಾರಿಸಿತು. ಅವಳ ಗಮನ ಮತ್ತೆ ಅದರತ್ತ ಹರಿಯಿತು. ಹಾಳೆಗಳ ತುಂಬ ಪದಗಳು ಕೈನೀಡಿ ಕುಳಿತಿದ್ದವು. ಒಲವು ಬಯಕೆಗಳು ಸ್ಪಷ್ಟವಾಗಿ

ಚಿತ್ರಿತವಾಗಿದ್ದವು. ಅವುಗಳ ಮುಖದ ಮೇಲೆ ಬೇಡಿಕೆ ಎದ್ದು ಕಾಣುತ್ತಿತ್ತು.

ಪತ್ರವನ್ನು ಓದಿದಾಗ ಅವಳಿಗೆ ಆನಂದವಾಗಿರಲಿಲ್ಲ, ಹೆಮ್ಮೆಯೆನಿಸಿರಲಿಲ್ಲ. ಈ ಪ್ರಶ್ನೆ ಅನಿವಾರ್ಯ ಎಂದು ಗೊತ್ತಿತ್ತು. ಎಂದಾದರೊಮ್ಮೆ ಎದುರಿಸಲೇ ಬೇಕಾದ ಪ್ರಸಂಗ ಇದು ಎಂಬ ಅರಿವಿತ್ತು. ಆದರೆ ಅದರ ಬಗ್ಗೆ ಯೋಚಿಸಲು ಇಷ್ಟವಿಲ್ಲದೆ ಮುಖ ತಿರುವಿ ನಡೆಯುತ್ತಿದ್ದಳು. ಈಗ ಪ್ರಶ್ನೆ ಎದುರಿಗೆ ಬಂದು ನಿಂತಿತ್ತು, ನೆಲೆಸಿತ್ತು. ಉತ್ತರ ಕೊಡದ ಹೊರತು ಮುಂದೆ ನಡೆಯುವಂತೆಯೇ ಇರಲಿಲ್ಲ.

ಕಾಗದದ ಜೊತೆಯಲ್ಲಿ ವಿಶ್ವನಾಥ ಒಂದು ಗುಲಾಬಿ ಹೂವನ್ನು ಕಳುಹಿಸಿದ್ದ. '.... ನನಗೆ ಸಿಕ್ಕಿರುವ ಮನೆ ಚೆನ್ನಾಗಿದೆ, ಅಚ್ಚುಕಟ್ಟಾಗಿದೆ. ಮನೆಯ ಸುತ್ತ ದೊಡ್ಡ ತೋಟವಿದೆ. ಗುಲಾಬಿ ಗಿಡಗಳಂತೂ ಬೇಕಾದಷ್ಟಿವೆ. ಅವುಗಳಿಂದ ಒಂದು ಹೂವನ್ನು ಕಿತ್ತು ನಿನಗೆ ಕಳುಹಿಸಿದ್ದೇನೆ, ನನ್ನ ಹೃದಯದಿಂದ ಒಂದು ಪುಟವನ್ನು ಎತ್ತಿ ಕಳುಹಿಸಿರುವಂತೆ....'

ಸುಂದರವಾದ ಬಿಳಿ ಗುಲಾಬಿ ಹೂ. ಅಂಗೈ ಅಗಲ. ದಳ ರೇಶಿಮೆಯ ನುಣುವು. ಮಧ್ಯದಲ್ಲಿ ಒತ್ತಾಗಿದ್ದ ಒಣಗಿದ ಕೇಸರ ಮಗುವಿನ ಗುಂಗುರು ಕೂದಲಿನಂತಿದ್ದವು. ಹೂವಿನ ಹಿಂಬದಿಯ ಪುಷ್ಪಪಾತ್ರೆ ಹಸಿರು ನಕ್ಷತ್ರ. ಶುಭ್ರವಾದ ಹಿಮಬಿಳಿ ನಸು ಹಳದಿಗೆ, ಕಂದು ಬಣ್ಣಕ್ಕೆ ತಿರುಗಿತ್ತು. ಕಂದು ಬಣ್ಣ ಬಳಿದ ಜಾಗಗಳಲ್ಲಿ ದಳದ ನರಗಳು ಸುಸ್ಪಷ್ಟ, ನಕಾಶೆಯ ಮೇಲಿನ ನದಿಗಳಂತೆ. ಗೆರೆ ತುಂಬಿದ, ಬಿಸಿಲು ಬಾಡಿಸಿದ ಮುಖ. ಪ್ರತಿ ಗೆರೆಯೂ ಒಂದು ವೃತ್ತಾಂತ, ಪ್ರತಿ ಗೆರೆಯೂ ಒಂದು ನಿವೇದನೆ. ಹೂವನ್ನು ಬಿಳಿ ಜಲ್ಲಿ ಕಾಗದದಲ್ಲಿ ಸುತ್ತಲಾಗಿತ್ತು: ತೆಳುವಾದ ಬಿಳಿ ಮೋಡದ ಹೊದಿಕೆಯನ್ನು ಹೊಂದಿದ ಚಂದ್ರ.

ಹಳತು ವಾಸನೆ, ಒಣಗಿದ ದಳಗಳು ನನ್ನ ಒಲವಿನ ಪ್ರತೀಕ. ನಿರ್ಜೀವವಾದ ಆದರೆ ನಾಶ ಮಾಡಲ್ಪಟ್ಟಿಲ್ಲದ ವಸ್ತು. ಸತ್ತಿದ್ದರೂ ಇನ್ನೂ ಸುಡಲ್ಪಟ್ಟಿಲ್ಲದ ವಸ್ತು. ....ನನಗೊಂದು ಬಿಳಿ ಗುಲಾಬಿ ....ವಿಶ್ವ, ನನಗೇಕೆ ಕಳುಹಿಸಿದೆ? ಬದಲಾಗಿ ಕೊಡಲು ನನ್ನ ಬಳಿ ಏನೂ ಇಲ್ಲ. ಎಲ್ಲವನ್ನೂ ಬೇರೊಬ್ಬರಿಗೆ ಕೊಟ್ಟು ಬಿಟ್ಟಿದ್ದೇನೆ. ನನಗೆ ಕೊಡಬೇಡ. ನಿನ್ನ ತೋಟದಲ್ಲೇ ಇರಲಿ. ಇನ್ನಾರಿಗಾದರೂ —ಅದರ ಅವಶ್ಯಕತೆ ಇದ್ದು ಇನ್ನಾರಿಗಾದರೂ—ಆಗುತ್ತದೆ. ನಿನ್ನ ಬಳಿಯಲ್ಲೇ ಇರಲಿ, ವಿಶ್ವ....ವಿಶ್ವ. ಹೌದು. ಅವನು ವಿಶ್ವವಾಗಿದ್ದ ಕಾಲ ಒಂದಿತ್ತು. ಆದರೆ ಬಿಳಿ ಹಳದಿಯಾಗಿದೆ. ಪ್ರಪಂಚ ಬೆಳೆದಿದೆ. ಈಗ ವಿಶ್ವ ವಿಶ್ವನಾಥ ಮಾತ್ರ, ವಿಶ್ವವಲ್ಲ....ಒಂದು ಬಿಳಿ ಗುಲಾಬಿ, ಕೆಂಪು ಗುಲಾಬಿ ಹೂಗಳಿಲ್ಲ. ಕೆಂಪಿನ ಕಾಲ ಕಳೆದಿದೆ. ಈಗ ಕೇವಲ ಹಳದಿಯಾಗಿರುವ ಬಿಳಿ, ಕಂದಾಗುತ್ತಿರುವ ಹಳದಿ.

ಮತ್ತೆ ಕಾಗದ ಪಟಪಟ ಹಾರಿತು; ಮುಕ್ತಕಂಠದಿಂದ ಯಾಚಿಸಿತು. ಹತ್ತಿರದಲ್ಲೇ ಇದ್ದ ಪುಸ್ತಕಗಳು ಅನುದ್ವೇಗಿಗಳಂತೆ ಸ್ತಬ್ಧವಾಗಿದ್ದವು.

ಜೀವನ ಗುಲಾಬಿ ಗಿಡ. ಒಂದು ಹೂವಿಗೆ ಎರಡು ಮೊಗ್ಗು, ಹತ್ತು ಮುಳ್ಳು, ನೂರು ಎಲೆ. ಒಂದು ಹೆಜ್ಜೆ ಹೂ, ಹತ್ತು ಮುಳ್ಳು. ಎಲೆಗೆ ಬೆನ್ನೆಂಟು ಮುಳ್ಳು.

ಜೀವನದಲ್ಲಿ ಎಷ್ಟು ಜಟಿಲತೆ! ರಘುವೀರನ ಕಡೆಗೆ ಮನಸ್ಸು ಬಾಗಿರದಿದ್ದರೆ....ಆದರೆ ಅವನ ಪರಿಚಯವಾದ ಮೇಲೆ ಅವನ ಕಡೆಗೆ ಮನಸ್ಸು ಬಾಗದಿರುವುದು ಹೇಗೆ ಸಾಧ್ಯ! ರಘುವೀರನ ಪರಿಚಯವಾಗಿರದಿದ್ದರೆ....ಆದರೆ ಕಾಲೇಜಿಗೆ ಬಂದ ಮೇಲೆ ಅವನ ಪರಿಚಯವಾಗದಿರುವುದು ಹೇಗೆ ಸಾಧ್ಯ? ಕಾಲೇಜಿಗೆ ಬರದಿದ್ದರೆ. . . .

ಕಾಲೇಜಿಗೆ ಬಂದಿದ್ದಳು. ಹೂವನ್ನು ಸಂಘಟಿಸಿದ್ದಳು. ಮುಂದೆ

ಕ್ರಮವಾಗಿ ಮೊಗ್ಗು, ಮುಳ್ಳು, ಎಲೆಗಳು ಮೆರವಣಿಗೆಯಲ್ಲಿ ಸಾಗಿ ಬಂದಿದ್ದವು.

ಕಾಲೇಜಿಗೆ ಸೇರಿದ ಕೆಲವು ದಿನಗಳಲ್ಲೇ ಅವಳಿಗೆ ರಘುವೀರನ ಪರಿಚಯವಾಗಿತ್ತು. ಅವನಾಗಲೇ ತರಗತಿಯ ಕಡೆಯ ವರ್ಷದಲ್ಲಿದ್ದ. ಉತ್ತಮ ಲೇಖಕನೆಂದು ಹೆಸರು ಗಳಿಸಿದ್ದ. ಒಂದು ದಿನ, ಎಲ್ಲರೂ ಯಾವುದೋ ಸಂಘದ ಉತ್ಸವಕ್ಕಾಗಿ ಸೇರಿದಾಗ, ಅವನ ಕೈಯೊಳಗಿನ ಒಂದು ಪುಸ್ತಕವನ್ನು ನೋಡಿದಳು. ಓದಬೇಕೆನಿಸಿತು. ಸ್ವಭಾವಕ್ಕನುಗುಣವಾಗಿ ಕೇಳಿಯೇ ಬಿಟ್ಟಳು. ನೇರವಾದ ಪ್ರಶ್ನೆಯನ್ನು ಕೇಳಿ ಒಂದು ಕ್ಷಣ ಆಶ್ಚರ್ಯಚಕಿತನಾಗಿದ್ದರೂ ಅದನ್ನವಳಿಗೆ ಕೊಟ್ಟಿದ್ದ. ಪುಸ್ತಕವನ್ನು ನಯವಾದ ಪೆನ್ಸಿಲ್ ಗೀರುಗಳು, ಟೀಕೆಗಳು ತುಂಬಿದ್ದವು. ಇದೂ ಒಂದು ಒಳ್ಳೆಯ ಪದ್ಧತಿಯೇ. ಬರೆದವರ ಸ್ವಭಾವ, ಅಭಿರುಚಿ, ಬುದ್ಧಿ ಇವುಗಳನ್ನು ಸಮಗ್ರವಾಗಿ ಅರಿತುಕೊಳ್ಳಬಹುದು. ಒಂದು ವ್ಯಕ್ತಿಯ ದಿನಚರಿಯ ಪುಸ್ತಕದಷ್ಟೇ ಸಹಾಯಕರ, ಎಂದುಕೊಂಡಿದ್ದಳು.

ಅಂದಿನಿಂದ ಅವರ ಗೆಳೆತನ ಬೆಳೆದಿತ್ತು. ಅವಳು ತಿಳಿದುಕೊಳ್ಳಬೇಕೆಂದು ಕೇಳಿದ ಪ್ರಶ್ನೆಗಳಿಗೆ ತಾನು ತಿಳಿದುಕೊಂಡಿದ್ದನ್ನು ಸಹನೆಯಿಂದ; ಉತ್ಸಾಹದಿಂದ ವಿವರಿಸುತ್ತಿದ್ದ, ಸಂಘಗಳ ಚಟುವಟಿಕೆಯಲ್ಲಿ ಭಾಗವಹಿಸಲು ಪ್ರೇರೇಪಿಸುತ್ತಿದ್ದ.

ಬರಬರುತ್ತ ಅವಳ ಸ್ನೇಹದಲ್ಲಿ ಸ್ವಲ್ಪ ಮಾರ್ಪಾಡಾಯಿತು. ಮೊದಲು ಅವನ ಮುಖ ಒರಟು, ಕಪ್ಪು ಎನಿಸುತ್ತಿತ್ತು. ಯಾವಾಗಲೂ ಮುಂಗುರಳು ಹಣೆಯನ್ನು ಗುಡಿಸುತ್ತಿತ್ತು; ಆದರೆ ಅಲ್ಲಿ ಮೂಡಿದ್ದ ಗೆರೆಗಳನ್ನು ಇನ್ನೂ ಗುಡಿಸಿ ಹಾಕಲು ಸಾಧ್ಯವಾಗಿರಲಿಲ್ಲ. ಎಲ್ಲದರಲ್ಲಿಯೂ ವ್ಯವಸ್ಥೆಯನ್ನು ಅಪೇಕ್ಷಿಸುತ್ತಿದ್ದವಳಿಗೆ ಅವನ ಮುಂಗುರುಳುಗಳ ಲಾಸ್ಯ ಪ್ರಿಯವಾಗುತ್ತಿರಲಿಲ್ಲ. ಆಮೇಲೆ ಅದೇ

ಮುಖ ತನ್ನದೇ ಆದ ವೈಶಿಷ್ಟ್ಯ, ಗಾಂಭೀರ್ಯಗಳಿಂದ ಕೂಡಿ ಸುಂದರ ವಾಗಿಯೇ ಕಾಣಿಸತೊಡಗಿತು. ಅದೊಂದು ಅಪಾಯ ಸೂಚನೆ ಎಂದು ಆಗ ಗೊತ್ತಾಗಿರಲಿಲ್ಲ. ಸೂಕ್ಷ್ಮ ಮಾರ್ಪಾಡಿನ ಅರಿವು ಅವನಿ ಗಾಯಿತೇನೊ. ದೂರದಿಂದ ಹತ್ತಿರ ಬಂದಿದ್ದ; ಇನ್ನೂ ಹತಿ ರಕ್ಕೆ ಬಂದರೆ ಚಿನ್ನ ಎಂದು ಅವಳು ಯೋಚಿಸುವ ಹೊತ್ತಿಗೆ ಅವನು ದೂರ ಸರಿಯುತ್ತಿದ್ದ. ಅವಳೊಡನೆ ಮಾತನಾಡುವುದನ್ನು, ಚರ್ಚಿಸುವು ದನ್ನು ಬಹಳವಾಗಿ ಕಡಿಮೆ ಮಾಡಿದ. ತನ್ನ, ತನ್ನ ಕೃತಿಗಳ ವಿಷಯ ವಾಗಿ ಮಾತನಾಡುವುದನ್ನಂತೂ ಬಿಟ್ಟೇ ಬಿಟ್ಟ. ಅವನಲ್ಲಾದ ಬದ ಲಾವಣೆ ಅವಳಿಗೆ ನೋವನ್ನುಂಟು ಮಾಡಿತ್ತು. ಬದಲಾವಣೆಗೆ ಕಾರ ಣಗಳನ್ನು ಹುಡುಕತೊಡಗಿದಳು. ತನ್ನ ಸ್ತ್ರೀ ಸಹಜ ಲಘುತ್ವ, ಚಿತ್ತ ಚಾಂಚಲ್ಯ, ಅಲಂಕಾರ ಮಗ್ನತೆ, ಹಾಸ್ಯ ಪ್ರಿಯತೆ ಇವುಗಳು ಅವನಿಗೆ ಸೇರುತ್ತಿರಲಿಲ್ಲವೇನೊ ಎಂದುಕೊಂಡಳು.

ಅವನ ಖ್ಯಾತಿ ಬೆಳೆದಂತೆ ಅವನ ಗಾಂಭೀರ್ಯ, ಏಕಾಕಿತನ ಗಳೂ ಬೆಳೆದವು. ಅವಳಿಂದ ಆದಷ್ಟು ದೂರವಾಗಿ ಇರಲು ಪ್ರಾರಂಭಿ ಸಿದ. ಇದಕ್ಕೆ ಕಾರಣ ಗರ್ವವೇ ಎನಿಸಿತು. ಇಲ್ಲ, ಪರಿಪೂರ್ಣತೆ ಹಂಬಲ, ಅದಕ್ಕಾಗಿ ತ್ಯಾಗ ಎಂದು ಗೊತ್ತಿತ್ತು.

ಇತ್ತೀಚೆಗೆ ಅವನಿಂದ ಕೇಳಿ ತೆಗೆದುಕೊಂಡ ಪುಸ್ತಕವೊಂದು ್ರಯ ಹತ್ತಿರವೇ ಇತ್ತು. ಎಂದಿನಂತೆ ಅವನ ಟೀಕೆಗಳು ಪುಸ್ತಕವನ್ನು ಅಲಂಕರಿಸಿದ್ದವು. ಒಂದು ಕಡೆ 'Light and Sweetness' ಎಂದು ಬರೆದಿತ್ತು... ಹೌದು. 'Light and Sweetness' ಅವರಿಬ್ಬರ ಪ್ರತೀಕಗಳು ತಾನು ಯಾವುದನ್ನು ಹಿಂಬಾಲಿಸಬೇಕು.

ಅವನಿಂದ ಒಂದು ಗುಲಾಬಿ. ಅವನೆದೆ ತನಗಾಗಿ ಕಾಯ್ದಿಟ್ಟ ಗುಲಾಬಿ ತನ್ನ ಮಾಲೆಗೆ ಸೇರಿಸಿದ. ನೆಮ್ಮದಿಯ ಉಸಿರಿನ ಪ್ರಣಾಮ ವನ್ನು ಅರ್ಪಿಸಿ ಮುಳ್ಳುಗಳ ಅಂಚಿಗೆ ಬಂದಳು. ಹಿಂದೆ ನೋಡದೆ ಗುಲಾಬಿ ತೋಟದತ್ತ ಸಾಗಿದಳು ...

* * * *

ಯಾರೋ ಕೂಗಿದಂತಾಯಿತು. ಕಣ್ತೆರೆದು ನೋಡಿದಳು ಅಲಂಕರಿಸಿಕೊಂಡು ಬಂದ ಗೆಳತಿ ಆಶ್ಚರ್ಯದಿಂದ ಕೇಳಿದಳು: ‘ ಇದೇನು ರಮಾ, ನೀನು ಇನ್ನೂ ಸಿದ್ಧವೇ ಆಗಿಲ್ಲ? ಬರುವುದಿಲ್ಲವೆ?’

ಗಂಭೀರವಾಗಿ ಉತ್ತರ ಕೊಟ್ಟಳು : ‘ ಇಲ್ಲಮ್ಮ, ನನಗೇಕೋ ವಿಪರೀತ ತಲೆ ನೋವು. ನೀನು ಹೋಗಿಬಿಟ್ಟು ಬಾ.’

ಗೆಳತಿ ವಿಸ್ಮಯಸೂಚಕ ಮುಖವನ್ನು ಹೊತ್ತು ನಡೆದಳು.

ಒಂದು ಗಳಿಗೆ ಸುಮ್ಮನೆ ಕುಳಿತಿದ್ದಳು. ಮುಖ ಶಾಂತ ವಾಗಿತ್ತು. ಆ ಮೇಲೆ, ತನಗೇ ಕೇಳಿಸದಂತಹ ಒಂದು ನಿಟ್ಟುಸಿರನ್ನು ಹೊರಚೆಲ್ಲಿ ಬಿಳಿ ಹಾಳೆಯನ್ನು ಹತ್ತಿರಕ್ಕೆ ಎಳೆದುಕೊಂಡಳು.

# ಸಂಗಮ

ಗಡಿಯಾರದ ಕಡೆ ನೋಡಿದ. ಪತ್ರಿಕೆಯನ್ನು ಎದುರಿಗೆ ಹರವಿದ. ಕಣ್ಣುಗಳು ಯಾಂತ್ರಿಕವಾಗಿ ಕಪ್ಪು ಅಕ್ಷರಗಳ ಸಾಲಿನುದ್ದ ಹರಿಯತೊಡಗಿದವು—ತಂತಿಯ ಮೇಲೆ ನಡೆಯುವ ಜಪಾನೀ ಆಟಗಾರರಂತೆ. ಹಿಂದಿನಿಂದ ಇಂಗ್ಲೀಷ್ ಮಾತು ಕೇಳಿಬರುತ್ತಿತ್ತು. ರೇಡಿಯೋ ಕಾರ್ಯಕ್ರಮವನ್ನು ಪರಿಶೀಲಿಸಿದ. ಕಾವ್ಯದ ಬಗ್ಗೆ ಏನೋ ಉಪನ್ಯಾಸ. ವಿಶೇಷ ಆಸಕ್ತಿಯಿಲ್ಲದ್ದರಿಂದ ಮತ್ತೆ ಪತ್ರಿಕೆಯಿಂದ ಸುದ್ದಿಗಳನ್ನು ಸಂಗ್ರಹಿಸತೊಡಗಿದ್ದ.

ಇದ್ದಕ್ಕಿದ್ದಂತೆ, ಕಾಗದದ ಹಾಳೆಗಳನ್ನು ತೂರಿ ಓದುತ್ತಿದ್ದವನ ಕಿವಿಯನ್ನು ಕೊರೆದವು ಸಾಲುಗಳು: ‘Who is the third?’ ....ಬಿಗಿದ ತಂತಿ ಕಳಚಿ ತೆಗೆದಿಡಲ್ಪಟ್ಟಿತು. ಆಟಗಾರರು ಅದೃಶ್ಯರಾದರು. ತಲೆಯನ್ನು ಮೇಲಕ್ಕೆತ್ತಿ ರೇಡಿಯೋದ ಕಡೆ ನೋಡಿದ. ನಿಮಿರಿದ ಕಿವಿ ಪದಗಳನ್ನು ಹೀರಿ ಜಾಗೃತವಾದ ಮಿದುಳಿನ ಮುಂದಿಟ್ಟವು. ಮಿದುಳು ಬೆಚ್ಚಿತು. ತಲೆಯ ಓಣಿ ಓಣಿಯಲ್ಲಿ ಸಾಲುಗಳು ಸಂಚರಿಸತೊಡಗಿದವು.

‘Who is the third, who walks always beside you? When I count there are only you and I together. But when I look ahead up the white road there is always another one walking beside you gliding wrapt in a brown mantle hooded—But who is that on the other side of you?’

ನಿರುದ್ಯೋಗಿ ತರುಣನಂತೆ ಕಾಲೆಳೆದುಕೊಂಡು ಸಾಗುತ್ತಿದ್ದ ಸಾಲುಗಳು ವೇಗವಾಗಿ ಹೆಜ್ಜೆ ಹಾಕತೊಡಗಿದವು ಪದಗಳು ತಮಟೆ ಯೊಂದಿಗೆ ಸಾರುವ ಡಂಗುರವಾದುವು. ಪ್ರಜಾ ಶಿಕ್ಷಣಕ್ಕಾಗಿ ರಸ್ತೆ ಯಲ್ಲಿ ತಿರುಗುವ ಸರಕಾರಿ ವ್ಯಾನುಗಳಾದವು. ಜಾಹೀರಾತುಗಳನ್ನು ಬಿತ್ತರಿಸುವ ಮೋಟಾರುಗಳಾದವು. ಕಾಮನ ಹಬ್ಬದಲ್ಲಿ ಕೂಗಾಡುವ ಹುಡುಗರ ತಂಡಗಳಾದವು. ಕಡೆಗೆ ರಸ್ತೆಗಳಲ್ಲಿ ಇವೆಲ್ಲವೂ ಕೂಡಿಯೇ ಮೆರವಣಿಗೆ ಹೊರಟವು. ಬೀದಿಗಳ ಎರಡು ಬದಿಗಳಲ್ಲೂ ಇದ್ದ ಮನೆ ಗಳಿಂದ ಜನರು ಹೊರಬಂದು ಮೆರವಣಿಗೆಯನ್ನು ಸೇರಿದರು. ಸೇರಿ ದವರು ಜಗುಲಿಗಳ ಮೇಲೆಯೇ ನಿಂತು ಕೂಗಾಡಿದರು.

ತಲೆ ನಡುಗಿದ ರಭಸಕ್ಕೆ ದೃಶ್ಯ ಮಾಯವಾಯಿತು. ಒಡೆದ ಕನ್ನಡಿಯೊಳಗಿಂದ ಪ್ರತಿಬಿಂಬ ಹಾರಿಹೋಯಿತು. ಕತ್ತು ಹೊರಳಿಸಿ ಹೆಂಡತಿಯನ್ನು ನೋಡಿದ. ವಾಚನಾಲಯದಿಂದ ತಂದ ಯಾವುದೋ ಒಂದು ಕಾದಂಬರಿಯನ್ನು ಓದುತ್ತಿದ್ದಳು. ಕೆಲವೇ ಅಡಿ ದೂರದಲ್ಲಿ ಆದ ವಿಪ್ಲವ ಅವಳ ಗಮನಕ್ಕೆ ಬಂದಿರಲಿಲ್ಲ. ಎದುರಿಗೆ ಬಿಚ್ಚಿದ ಪ್ರಣಯ ಕತೆಯಲ್ಲಿ ಅವಳು ಮಗ್ನಳಾಗಿದ್ದಳು.

ವಿಮಾನದ ಚಾಲಕ ದಂಡಗಳು ಸುತ್ತುವಂತೆ ಪ್ರಶ್ನೆ ಸುತ್ತ ಲಾರಂಭಿಸಿತು: 'Who is the third?' ತಿರುಗಾಟಕ್ಕೆ ಹೋದಾಗ ತಲೆಯ ಸುತ್ತ ಕುಣಿಯುವ ಸೊಳ್ಳೆಗಳಂತೆ ಪದಗಳು ಕುಣಿಯಲಾರಂಭಿಸಿದವು. 'Who is the third?' ಮೂರನೆ ತಿರುಗಾಟಕ್ಕೆ ಹೋದಾಗ ತಲೆಯ ಸುತ್ತ ಕುಣಿಯುವ ಸೊಳ್ಳೆಗಳಂತೆ ಪದಗಳು ಕುಣಿಯಲಾರಂಭಿಸಿದವು: 'Who is the third..?' ಮೂರನೆಯವರಾರು?

ಬಹು ದಿನಗಳಿಂದ ಕಾಡುತ್ತಿದ್ದ ಪ್ರಶ್ನೆಯದು. ಮದುವೆಗೆ ಮುಂಚಿನಿಂದ ಅವನು ಕೆಲಸಕ್ಕೆ ಹೊಸದಾಗಿ ಸೇರಿದಾಗ, ಅವಳು

ಬೇರೆ ಊರಿನಲ್ಲಿ ಓದುತ್ತಿದ್ದಾಗ ಇದರ ನೆರಳು ಅವನನ್ನು ಹಿಂಬಾಲಿಸಿತ್ತು. ಅವನಿಗೆ ಆಗಾಗ ಬರುತ್ತಿದ್ದ ಆವಳ ಕಾಗದಗಳಲ್ಲಿ-ಪ್ರೇಮಮಯ, ಉತ್ಸಾಹಪೂರ್ಣ, ಆಸಕ್ತಿದಾಯಕ ಕಾಗದಗಳು–ಯಾವುದೋ ಒಂದು ಅದೃಶ್ಯ ಹಸ್ತದ ಆಟವಿದ್ದಂತಿತ್ತು. ಕೆಲವು ವೇಳೆ ನೇರ, ಸ್ಪಷ್ಟ: 'ಗೆಳೆಯರೊಬ್ಬರ ಅಭಿಪ್ರಾಯ ಹೀಗೆ', 'ಪರಿಚಿತಸ್ಥರೊಬ್ಬರು ಹೀಗೆ ಹೇಳಿದರು....', ಇತ್ಯಾದಿ. ಕೆಲವು ವೇಳೆ ಅನೇಕ, ಅಸ್ಪಷ್ಟ; ಪರದೆಯ ಮೇಲೆ ಮೂಡಿದ ಕಪ್ಪು ನೆರಳಿನಂತೆ.

ಕುತೂಹಲ ಹುಟ್ಟಿ ಆ ವ್ಯಕ್ತಿಯ ಬಗ್ಗೆ ಪ್ರಶ್ನಿಸಿದ್ದ. ಅವಳು ಉತ್ತರ ಕೊಟ್ಟಿರಲಿಲ್ಲ. ಒತ್ತಾಯ ಮಾಡಿ ಪ್ರಶ್ನಿಸಬಹುದಾಗಿತ್ತು. ಆದರೆ ಅವನಿಗೆ ವ್ಯಕ್ತಿತ್ವದ ಬಗ್ಗೆ ಅಸಾಮಾನ್ಯವಾದ ಗೌರವವಿತ್ತು. ಅವಳಾಗಿಯೇ ಹೇಳದ ವಿಷಯಗಳನ್ನು ನಾನೇಕೆ ಬಲವಂತದಿಂದ ಹೊರಗೆಳೆಯಬೇಕು? ಎನ್ನುವ ಮನೋಭಾವ ಅವನದಾಗಿತ್ತು. ಮದುವೆಯಾದ ಮೇಲೆ ಛಾಯೆ ಮಂಕಾಯಿತು. ತೆರೆಯ ಮೇಲಿನ ನೆರಳು ನೀರಿನ ಮೇಲೆ ಮಾತ್ರ ಮೂಡಿತು. ಆದರೂ ಕೆಲವೊಮ್ಮೆ ನೆನಪು ನೆಲದ ಬಿಲದಿಂದ ಧಾವಿಸಿ ಬಂದು ಅವನ ಹಣೆಗೆ ಸುತ್ತಿಗೆ ಏಟು ಕೊಡುತ್ತಿತ್ತು. ಚಂದ್ರನನ್ನು ಮೆಟ್ಟಿ ಮುಂದೋಡುವ ಕಪ್ಪು ಮೋಡಗಳ ಸಾಲಿನಂತೆ. ಹೆಂಡತಿಯ ಮುಗ್ಧ ಮುಖಭಾವ, ಅವಳ ನಿರ್ವ್ಯಾಜ್ಯ ನಡೆವಳಿಕೆ ಇವು ಹಣೆಯ ಮೇಲೆ ಒದ್ದೆಪಟ್ಟಿಯನ್ನು ಹಾಕುತ್ತಿದ್ದವು. ಏಟಿನಿಂದ ಚೇತರಿಸಿಕೊಳ್ಳಲು ಕೆಲವೇ ಕ್ಷಣಗಳು ಸಾಗುತ್ತಿದ್ದವು. ನೆರಳು ಮಾಯವಾಗಿ ನೀರು ತಿಳಿಯಾಗುತ್ತಿತ್ತು. ಆದರೂ ಆಗಾಗ ನೋವು ಮರುಕಳಿಸುತ್ತಿತ್ತು. ಹೆಂಡತಿಯ ಒಂದು ಮುಖಚರ್ಯೆ, ಒಂದು ಮಾತು. ಒಂದು ನಡವಳಿಕೆ, ನೋವಿಗೆ ಆಹ್ವಾನವಾಗಿ ಪರಿಣಮಿಸುತ್ತಿದ್ದುವು. ತಿಳಿಯಾದ ನೀರು ಮತ್ತೆ ರಾಡಿಯಾಗುತ್ತಿತ್ತು. ಶಂಕೆ ಅವನ ಮುಂದೆ ಕುಣಿದು ಕಣ್ಸೆಳೆಯಲು ಪ್ರಯತ್ನಿಸುತ್ತಿತ್ತು. ನರ್ತಕಿಯ ಹಸಿರು-ಹಳದಿ ಬಣ್ಣದ ಸೆರಗು

ಗಂಡಹೆಂಡರ ನಡುವೆ ಹಾರಿ ಅಂತ:ಪಟವಾಗುತ್ತಿತ್ತು. ಅಂತ:ಪಟ ಸರಿಯದೆ ಅಡ್ಡಗೋಡೆ ಬೆಳೆದು ಆಣೆ ಕಟ್ಟಾಗುತ್ತಿತ್ತು. ಆಣೆಕಟ್ಟನ್ನು ಒಡೆದು ಹೆಂಡತಿಯನ್ನು ಸೇರಬೇಕಾದರೆ ಅವನ ಶಕ್ತಿಯೆಲ್ಲಾ ಬೇಕಾಗುತ್ತಿತ್ತು.

ಎಷ್ಟೋ ಬಾರಿ ಅವಳನ್ನು ಕೇಳಬೇಕೆನಿಸುತ್ತಿತ್ತು. ಮದುವೆಗೆ ಮುಂಚೆ, ನನಗೇನು ಅಧಿಕಾರ ಕೇಳುವುದಕ್ಕೆ, ಎಂದುಕೊಳ್ಳುತ್ತಿದ್ದ. ಮದುವೆ ಆದ ಮೇಲೂ, ಮದುವೆಯಾದ ಮಾತ್ರಕ್ಕೆ ರಹಸ್ಯಗಳನ್ನೆಲ್ಲಾ ಹೊರಕೀಳುವ ಅಧಿಕಾರ ಬರುತ್ತದೆಯೆ? ಎಂಬ ಪ್ರಶ್ನೆ ಅವನ ನಾಲಿಗೆಯನ್ನು ತಡೆಯುತ್ತಿತ್ತು. ಪ್ರಶ್ನೆಗೆ ಉತ್ತರ ಸಮರ್ಪಕವಾದ ಉತ್ತರ-ದೊರಕದೆ ಸುಮ್ಮನಾಗುತ್ತಿದ್ದ. ಮನಸ್ಸು ಕೆಲವೊಮ್ಮೆ ಹುಡುಗನ ಕೈಗೆ ಸಿಕ್ಕ ಚಿಟ್ಟೆಯಂತೆ ಒದ್ದಾಡುತ್ತಿತು! ಯಾರು ಅವನು? ಅವಳಿಗೆ ಅವನಲ್ಲಿ ಪ್ರೇಮವಿದ್ದಿರಬಹುದೆ? ಈಗಲೂ ಇರಬಹುದೆ....? ಹೃದಯ ಚಂದನವನ್ನು ಲೇಪಿಸುತ್ತಿತ್ತು: ಇರಲಾರದು. ನನ್ನ ಜೀವದಲ್ಲಿ ಅವಳ ಜೀವ ಎನ್ನುವಂತೆ ನಡೆದುಕೊಳ್ಳುತ್ತಾಳೆ. ಇದು ನಟನೆಯಿರಲಾರದು. ಈ ವಿಹಾರ ನೌಕೆಯಲ್ಲಿ ನಮ್ಮಿಬ್ಬರ ಹೊರತು ಇನ್ನಾರೂ ಇರಲಾರರು....

* * * *

ರೇಡಿಯೋದಲ್ಲಿ ಉಪನ್ಯಾಸ ಮುಗಿದು ಹಿಂದುಸ್ತಾನಿ ಸಂಗೀತ ಆರಂಭವಾಗಿತ್ತು. ನಿಲ್ಲಿಸಿದ.

‘‘....ಹಿಂದುಸ್ತಾನಿ ಸಂಗೀತದ ಮುಂದೆ ಇನ್ನೊಂದಿಲ್ಲ ಎಂದು ನನ್ನ ಸ್ನೇಹಿತರೊಬ್ಬರು ಅನ್ನುತ್ತಾರೆ’....

ಯಾರು ಅವರು?

ಪತ್ರಿಕೆಯನ್ನು ಬದಿಗಿರಿಸಿ ತಾನೂ ಒಂದು ಕಾದಂಬರಿಯನ್ನು ಕೈಗೆತ್ತಿಕೊಂಡ. ಮಾಮ್ ಬರೆದ ಕಾದಂಬರಿ. ಓದುತ್ತ ಕುಳಿತ.

'....... ಇಂದೊಂದು ವಿಚಾರಪೂರ್ಣ ಚರ್ಚೆ ಜರುಗಿತು. ಮಾಮ್ ಸಿನಿಕ ಎಂದು ಕೆಲವರು ವಾದಿಸಿದರು. ಆದರೆ ಒಬ್ಬರು ಮಾತ್ರ ಈ ಅಭಿಪ್ರಾಯವನ್ನು ಖಂಡಿಸಿ ಮಾಮ್ ಸಿನಿಕನಲ್ಲ. ವಾಸ್ತವವಾದಿ; ಭಾವಾತಿರೇಕದಿಂದ ದೂರವಿರುವ ವಾಸ್ತವವಾದಿ ಎಂದು ತಿಳಿಸಿಕೊಟ್ಟರು....'

ಯಾರು ಅವರು ?

ಪುಸ್ತಕವನ್ನು ಹಿಂದೊಮ್ಮೆ ಓದಿದ್ದಂತೆ ನೆನಪಾಯಿತು. ಆದ್ದರಿಂದಲೋ ಏನೋ ಕಥೆ ರುಚಿಸದೆ ಹೋಯಿತು. ಪುಸ್ತಕವನ್ನು ಮುಚ್ಚಿಟ್ಟು ಪಕ್ಕದ ಕೋಣೆಗೆ ಹೋದ. ತಂಬಿಗೆಯಿಂದ ಲೋಟಕ್ಕೆ ನೀರು ಬಗ್ಗಿಸಿಕೊಂಡು ಕುಡಿದ. ಬೀರುವಿನ ಮೇಲೆ ತಂಬಿಗೆಯ ಪಕ್ಕದಲ್ಲಿ, ಬೆಳ್ಳಿಯ ಚೌಕಟ್ಟು ಹಾಕಿದ ಫೋಟೋ ಕುಳಿತಿತ್ತು. ಈಚೆಗೆ ತೆಗೆದ ಫೋಟೋ ಅದು. ಮೂರು, ನಾಲ್ಕು ತಿಂಗಳುಗಳ ಕೆಳಗೆ ಊರಿಗೆ ಬಂದಿದ್ದ ಸ್ನೇಹಿತನೊಬ್ಬ ಅವರ ಮನೆಯಲ್ಲಿಯೇ ಇಳಿದುಕೊಂಡಿದ್ದ. ಊರನ್ನು ಬಿಡುವ ಮುಂಚೆ ಅವರ ಫೋಟೋಗಳನ್ನು ತೆಗೆದಿದ್ದ. ಫೋಟೋದಲ್ಲ ತಾವಿಬ್ಬರೇ....ಹೌದೆ ? ಹಿಂದೆ ಒಂದು ನೆರಳಿರಲಿಲ್ಲವೆ ?

ಕಣ್ಣು ಬೀರುವಿಗೆ ತೊಡಿಸಿದ ಕನ್ನಡಿಯನ್ನು ಸಂಧಿಸಿತು. ಅವನ ಹಣೆ ನೋಟ್‌ಬುಕ್ಕಿನ ಹಾಳೆಯಾಗಿತ್ತು. ಮುಖವನ್ನು ಸರಿಪಡಿಸಿಕೊಳ್ಳುವ ಉದ್ಯಮಕ್ಕೆ ತೊಡಗುವಷ್ಟರಲ್ಲಿಯೇ ಗೋಡೆಯ ಮೇಲಿದ್ದ ಚಿತ್ರ ಕಣ್ಣಿಗೆ ಎದುರಾಯಿತು. ಅವರ ಮದುವೆಯಲ್ಲಿ ತೆಗೆದ ಚಿತ್ರ ಅದು. ಸಾಲಂಕೃತ ಜೋಡಿ. ಕುತ್ತಿಗೆಯ ಸುತ್ತ ಹೂವಿನ ಹಾರಗಳು . ಅವಳ ಕುತ್ತಿಗೆಯನ್ನು ಬಳಸಿದ ಒಂದು ಮಾಲೆ ಅವನಿರಬಹುದೆ ?

ಮಂಚದ ಮೇಲೆ ಅವಳು ಸಂಜೆ ಉಟ್ಟಿದ್ದ ಶಿಫಾನ್ ಸೀರೆ ಮೈ ಮುರಿಯುತ್ತ ಬಿದ್ದಿತ್ತು. ಬಿಳಿಯ ಹಿನ್ನೆಲೆಯ ಮೇಲೆ ಕೆಂಪು

ಹೂಗಳ ಅಚ್ಚು. ಸೀರೆ ಅವಳಿಗೆ ಬಲು ಚೆನ್ನಾಗಿ ಒಪ್ಪುತ್ತಿತ್ತು. ಹೂಗಳ ಕೆಂಪು ಮುಖಕ್ಕೆ ಕೆಂಪು ತುಂಬುತ್ತಿತ್ತು. ಹೂಗಳ ನಡುವಿನ ಕಾಸಿನಗಲದ ಜರತಾರಿ ಕೇಸರಗಳು ದೀಪದ ಬೆಳಕಿನಲ್ಲಿ ಹೊಳೆಯುತ್ತಿದ್ದವು. ನೂರು ತುಂಟ ಕಳೆಯ ಮುಖಗಳು ಅವನನ್ನು ನೋಡಿ ಕಣ್ಣು ಮಿಟುಕಿಸುತ್ತಿದ್ದವು.

....'ನನಗೆ ಕೆಂಪು ಬಣ್ಣ ಒಪ್ಪುವುದಿಲ್ಲವಂತೆ! ಆದರೆ ನನಗೆ ಕೆಂಪು ಬಣ್ಣ ಕಂಡರೆ ಪ್ರಾಣ. ಅದೂ ಅಲ್ಲದೆ ಕೆಂಪು ಈಗ ತುಂಬ ಫ್ಯಾಶನಬಲ್! ಹೀಗಾಗಿ ನಾನು ಕೆಂಪು ಬಣ್ಣದ ಸೀರೆಗಳನ್ನು ಉಡುವುದನ್ನು ಬಿಟ್ಟಿಲ್ಲ. (ಈ ಅಭಿಪ್ರಾಯ ಕೊಟ್ಟವರಿಗೆ ಕೆಂಪನ್ನು ಕಂಡರಾಗುವುದಿಲ್ಲ. ಆದ್ದರಿಂದಲೇ ಈ ಟೀಕೆ ಇರಬೇಕು!....'

ಇಷ್ಟು ವೈಯಕ್ತಿಕ ವಿಷಯಗಳಲ್ಲೂ ಅವನು!

ಕುತೂಹಲ ಹೊರಳಿ ಅಸಮಾಧಾನವಾಗುತ್ತಿತ್ತು. ಅಸಮಾಧಾನ ಕುದಿದು ಅಸೂಯೆ ಆಗಬಹುದಾಗಿತ್ತು. ಆಗಬಹುದಾಗಿತ್ತು—ತಾನು ಎಚ್ಚರದಿಂದ ಇರದಿದ್ದರೆ, ತನಗೆ ಅಸೂಯೆಯನ್ನು ಕಂಡರೆ ಅತ್ಯಂತ ತಿರಸ್ಕಾರವಿರದಿದ್ದರೆ. ಆದರೂ ಆತಂಕವಿತ್ತು. ಅಸ್ಪಷ್ಟವಾದ ಭಯ ಬಾಧಿಸುತ್ತಿತ್ತು. ಬಾಧಿಸುತ್ತಿತ್ತು, ಬೋಧಿಸುತ್ತಿತ್ತು: ಕೇಳಿಬಿಡು ಅವಳನ್ನು, ಯಾರವನು? ಯಾರವನು?... ಇನ್ನೂ ತಾನು ಬೋಧನೆಯನ್ನು ಒಪ್ಪಿ ನಡೆದಿರಲಿಲ್ಲ.. ಆದರೆ....ಕೇಳಿದರೆ ಒಳ್ಳೆಯದೇನೋ....

ಮಂಚ. ಹಾಸಿಗೆ. ಹಾಸಿಗೆಗಿನ್ನೂ ಅವನ ನೆರಳು ಅವನು? ಅಥವಾ ಅವಳು ಅವನ ನೆರಳೋ? ಇಬ್ಬರಿಗೆಂದು ಕಟ್ಟಿದ ಮನೆಯಲ್ಲಿ ಮೂರನೆಯ ಒಂದು ವ್ಯಕ್ತಿ. ಇಬ್ಬರಿಗೆ ಮೀಸಲಾಗಿದ್ದ ಹಾಸಿಗೆಯಲ್ಲಿ ಮೂರನೆಯ ಒಂದು ವ್ಯಕ್ತಿ. ಅದೃಶ್ಯವಾದ ಆದರೆ ಅಸಮರ್ಥನಲ್ಲದ ಒಂದು ವ್ಯಕ್ತಿ. ತನ್ನ ಮಗ್ಗುಲಲ್ಲಿ ಮಲಗಿದಾಗ

ಅವಳು ಅವನ ಕನಸು ಕಾಣುತ್ತಿರಬಹುದೇ? ಎಂದಾದರೂ ನಿದ್ರೆಯಲ್ಲಿ ಅವಳು ಯಾರದಾದರೂ ಹೆಸರನ್ನು ಉಚ್ಚರಿಸಿದ್ದಳೆ? ತನಗೆ ಅವಳ ಕನಸು ಬೀಳುತ್ತಿರುವಾಗ, ತಾವಿಬ್ಬರೂ ಬೇರೆಯಾಗಿದ್ದಾಗ ತಾನು ಅವಳ ಬಗೆಗೆ ಕನಸು ಕಾಣುವಂತೆ, ಅವಳು ಅವನ ಬಗೆಗೆ ಕಾಣುತ್ತಿರಬಹುದ?

ಯಾರವನು ? ಯಾರವನು ?

ಈ ರಹಸ್ಯವನ್ನು ಬಯಲಿಗೆಳೆಯಬೇಕು. ಈ ಅಶಾಂತಿಯನ್ನು ಕೊನೆಗಾಣಿಸಬೇಕು. ಕತ್ತಲೆ ಕೋಣೆಯಿಂದ ಹೊರಬೀಳಬೇಕು. ಬಾಗಿಲಿಗೆ ಹೂವಿನ ತೆರೆಯಿರಬಹುದು. ಹೊಸ್ತಿಲಿಗೆ ಮಲ್ಲಿಗೆಯ ರಂಗೋಲಿ ಇರಬಹುದು, ಹೊರಗೆ ಮಳೆ ಬಿಲ್ಲು ಮೂಡಿರಬಹುದು, ಮೋಡ ಮುಸುಕಿರಬಹುದು. ಏನಿದ್ದರೂ ಚಿಂತೆಯಿಲ್ಲ. ಶೂಲದ ಆಸನ ಸಾಕು. ಬಾಗಿಲನ್ನು ಕೊಡಲಿಯಿಂದ ಒಡೆಯದೆ, ಬಾಗಿಲಿಗೆ ಬೆಂಕಿ ಹಚ್ಚದೆ, ಮೃದುವಾಗಿ ಆದರೆ ದೃಢವಾಗಿ ತಳ್ಳಿ ಆಚೆಗೆ ಹೋಗಬೇಕು.

ಮತ್ತೆ ಮಗ್ಗುಲ ಕೋಣೆಗೆ ಮರಳಿದ. ಅವಳಿನ್ನೂ ಕಾದಂಬರಿಯಲ್ಲಿ ಮಗ್ನಳಾಗಿದ್ದಳು. ಕಣ್ಣುಗಳು ಕಾದಂಬರಿಯ ಕೊನೆಯ ಪುಟಗಳಲ್ಲಿ ಓಡಾಡುತ್ತಿದ್ದವು. ಬಾಗಿಲಿನಲ್ಲಿ ನಿಂತು ನೋಡಿದ. ಎಂದಿನಂತೆ ದೀರ್ಘ ನೋಟ ಒಲುಮೆಯನ್ನು ಉಕ್ಕಿಸಿತು. ಒಂದೂವರೆ ವರ್ಷದ ಸಹವಾಸ, ಎರಡು ವರ್ಷಗಳ ಪರಿಚಯ ...

ಅನಿಶ್ಚಯ ಕಡೆಯ ಬಾರಿ ಕಡಿವಾಣವೆಳೆಯಿತು : ತನ್ನನ್ನು ಅಸೂಯೆಗೀಡು ಮಾಡಬೇಕೆಂದೇ ಹಾಗೆಲ್ಲ ಅನ್ನುತ್ತಿರಬಹುದೆ? ಸ್ತ್ರೀಯರಲ್ಲಿ ಇದೊಂದು ನೈಸರ್ಗಿಕ ಗುಣವಷ್ಟೆ!.... ಕಡಿವಾಣ ಸಡಿಲವಾಯಿತು. ನಿಶ್ಚಯ ಧೃಢರೂಪವನ್ನು ತಾಳಿತು. ಮಾತುಗಳ ಹಿಂದೆ ಸ್ವಲ್ಪವೂ ಒಲವು ಹುಡುಗಾಟ ಇರುತ್ತಿರಲಿಲ್ಲ .... ....

ಅವಳ ಹತ್ತಿರ ಹೋದ. ಕುರ್ಚಿಯ ತೋಳಿನ ಮೇಲೆ ಕುಳಿತ. ಅವಳು ಪುಸ್ತಕದಿಂದ ತಲೆಯೆತ್ತಿ ಅವನ ಕಡೆ ನೋಡಿ ಮುಗುಳ್ನಗೆ ನಕ್ಕಳು. ಬಿರಿದ ನಗೆ ಮುಗುಳಿನ ಪ್ರೇಮ ಅವನಿಗೆ ಧೈರ್ಯ ಕೊಟ್ಟಿತು.

ಅವಳ ತಲೆಯನ್ನು ತನ್ನ ಎದೆಗೆ ಒರಗಿಸುತ್ತ ಹೇಳಿದ: 'ನಿನ್ನನ್ನೊಂದು ಪ್ರಶ್ನೆ ಕೇಳಬೇಕಾಗಿದೆ....'

ಅವಳ ಹುಬ್ಬುಗಳು ಪ್ರಶ್ನಾರ್ಥಕವಾಗಿ ಮೇಲೇರಿದವು. ಮುಖವನ್ನು ದಿಟ್ಟಿಸುತ್ತ ಅಂದ: 'ನನ್ನನ್ನು ಮದುವೆಯಾಗುವದಕ್ಕೆ ಮುಂಚೆ ನೀನು ಬೇರೆ ಯಾರನ್ನಾದರೂ ಪ್ರೀತಿಸುತ್ತಿದ್ದೆಯ ?'

ಅವಳ ಕಣ್ಣುಗಳು ಅಗಲವಾದುವು. ಉಸಿರು ತಡೆದು ಬಂತು. ಎದೆಗೆ ಸೋಕಿದ್ದ ಕತ್ತು ಬಿಗಿಯಾಯಿತು.

'ಹೇಳಬಹುದಾದರೆ ಹೇಳು.'

ಆಗ ಅವಳು ಅತ್ತಳು. ಇದ್ದಕ್ಕಿದ್ದಂತೆ, ಮುನ್ ಸೂಚನೆಯಿಲ್ಲದೆ ಅತ್ತಳು. ತಲೆಯನ್ನು ಹೊರಳಿಸಿ ಅವನೆದೆಗೆ ಮುಖವಿಟ್ಟು ಅತ್ತಳು. ಶರ್ಟನ್ನು ತೂರಿ ಕಣ್ಣೀರು ಎದೆಯನ್ನು ಸೇರಿತು. ಕಾದ ಕಲ್ಲನ್ನು ತಂಪು ಮಾಡಿತು. ಅವಳನ್ನು ಬಳಿ ಸೆಳೆದು, ಬಿಗಿಯಾಗಿ ಹಿಡಿದು ಸಂತೈಸಿದ. ಕೆಲವು ನಿಮಿಷಗಳು ಕಳೆದ ಮೇಲೆ ಮಾತನ್ನಾಡತೊಡಗಿದಳು. ಧ್ವನಿ ರಾಜಬೀದಿಯಲ್ಲಿ ನೇರವಾಗಿ ಓಡುವ ರಥವಾಗಿರಲಿಲ್ಲ. ಹಳ್ಳ, ತಿಟ್ಟುಗಳ ಮೇಲೆ ಕುಂಟುವ ಗಾಡಿಯಾಗಿತ್ತು.

ಕಾಲೇಜಿನಲ್ಲಿ ಯುವಕ ಅಧ್ಯಾಪಕ-ಬಹಳ ಒಳ್ಳೆಯವನು-ತರುಣಾವಸ್ಥೆಯಲ್ಲಿ ಗುರುವಿನ ಸುತ್ತ ಒಲವಿನ ಮಲ್ಲಿಗೆ ಮಂಟಪವನ್ನು ಕಟ್ಟುವುದು ಸಹಜ—ಆರಾಧಕ ಪ್ರೌಢಾವಸ್ಥೆಗೆ ಕಾಲಿಟ್ಟ ಕೂಡಲೆ ಬಾಡಿ, ಮಂಟಪ ಕುಸಿಯುವುದು ಅಷ್ಟೇ ಸಹಜ—ಈಗ ನಾನು ಅವ

ನೆಂದ ಸಂಪೂರ್ಣವಾಗಿ ವಿಮುಕ್ತೆ—ನಿನಗೆ ಎಂದೋ ಹೇಳಬಹು ದಾಗಿತ್ತು—ಆದರೆ ಹೇಳುವಷ್ಟು ಮಹತ್ವದ ವಿಷಯ ಇದು ಎನ್ನಿಸಿರಲಿಲ್ಲ.....'

ಅವನ ನೆಮ್ಮದಿಯ ಉಸಿರು ಹೇಳಿಕೆಗೆ ಸಮಾಪ್ತಿಯ ಗೆರೆಯನ್ನೆಳೆದ ಅವಳ ಉಸಿರನ್ನು ಸಂಧಿಸಿತು, ಸೇರಿತು. ಬಲಗೊಂಡ ಕೈನೆಲವನ್ನು ಅಗೆದು ನೆರಳನ್ನು ಹುಗಿಯಿತು.



# ಕಲ್ಯಾಣಿ

ದೀಪಾಲಂಕೃತವಾದ ಕಟ್ಟಡದಿಂದ ನಾಲ್ಕು ವ್ಯಕ್ತಿಗಳ ಒಂದು ಗುಂಪು ಕತ್ತಲೆಗೆ ಇಳಿದು ಬಂದಿತು. ಗೇಟಿನ ಬಳಿ ಒಬ್ಬರಿಗೊಬ್ಬರು ಕೈಮುಗಿದರು. ಸ್ತ್ರೀ ವ್ಯಕ್ತಿ ಗೇಟಿನ ಬಳಿಯೇ ನಿಂತಿದ್ದ ಕಾರೊಂದ ರಲ್ಲಿ ಕುಳಿತಿತು. ಕಾರು ಹೊರಟಿತು. ಕಾರು ಕಣ್ಮರೆಯಾದ ಮೇಲೆ ಮೂವರು ಗಂಡು ವ್ಯಕ್ತಿಗಳೂ ಸೈಕಲ್ಲುಗಳನ್ನೇರಿ ಸಾಗಿದವು.

*  *  *  *

ರಸ್ತೆಯನ್ನು ತುಂಬಿದ್ದ ಕತ್ತಲೆಗೆ ಶಾಪ ಹಾಕುತ್ತ ಸಾಗಿದ್ದ ಕೇಶವ. ಕಣ್ಣಿಗೆ ಕತ್ತಲೆ ರೂಢಿಯಾದಂತೆ ಶಾಪಗಳು ಕಡಿಮೆಯಾಗ ತೊಡಗಿದವು. ವಿಶ್ರಾಂತಿಯನ್ನು ಪಡೆದ ಮನಸ್ಸು ಬಿಟ್ಟುಬಂದ ಸಂಘವನ್ನು ಕುರಿತು ಯೋಚಿಸತೊಡಗಿತು.

ಅಂದು ಊರಿನ ಕನ್ನಡ ಸಂಘದ ಉದ್ಘಾಟನಾ ಸಮಾರಂಭ. ಊರಿನ ಕನ್ನಡಿಗರಲ್ಲಿ ಬಹು ಮಂದಿಗೆ ಆಮಂತ್ರಣ ಪತ್ರಿಕೆ ಹೋಗಿತ್ತು. ಯಶಸ್ವಿ ದಿನ ಪತ್ರಿಕೆಯೊಂದರ ಒಡೆಯರಾದ ರಾಘ ವೇಂದ್ರರಾಯರಿಗೆ ವಾರದ ಮುಂಚೆಯೇ ಆಹ್ವಾನ ತಲುಪಿತ್ತು. ಏನೋ ಕೆಲಸದ ನಿಮಿತ್ತ ಅವರು ಸಮಾರಂಭಕ್ಕೆ ಬರಲಾಗದಿದ್ದರಿಂದ ಅವರ ಮಗ ಕೇಶವ ಒಬ್ಬನೇ ಬಂದಿದ್ದ. ಉದ್ದುದ್ದದ ಭಾಷಣಗಳು, ಸಾಮಾನ್ಯ ದರ್ಜೆಯ ವಿನೋದಾವಳಿ ಅವನಿಗೆ ಬೇಸರವನ್ನು ತಂದಿತ್ತು. ಮುಂದಿನ ಸಾಲಿನಲ್ಲಿಯೇ ಅವನನ್ನು ಕೂರಿಸಿದ್ದರಿಂದ ಮಧ್ಯದಲ್ಲಿ ಎದ್ದು ಬರಲೂ ಆಗಿರಲಿಲ್ಲ. ಅನ್ಯಾಯವಾಗಿ ಒಂದು ದಿನದ ಟೆನ್ನಿಸ್ ಆಟ ತಪ್ಪಿತಲ್ಲ ಎಂದು ಅವನಿಗೆ ರೇಗಿತ್ತು. ಮುಂದಿನ

ತಿಂಗಳು ಕ್ಲಬ್ಬಿನಲ್ಲಿ ಪಂದ್ಯಗಳು ಬೇರೆ! ರಾಷ್ಟ್ರಗೀತೆಯಾದ ನಂತರ ಬೇಗ ಹೊರಗೆ ಬರಲು ಹವಣಿಸುತ್ತಿದ್ದವನನ್ನು ಸಂಘದ ಕಾರ್ಯದರ್ಶಿ ಮಾತನಾಡಿಸುತ್ತ ನಿಲ್ಲಿಸಿಕೊಂಡರು. ಅವನ ತಂದೆಯನ್ನು ಮುಕ್ತಕಂಠದಿಂದ ಹೊಗಳತೊಡಗಿದರು. ಅವನು ಅಸಹನೆಯಿಂದ ಕೇಳುತ್ತ ನಿಂತ. ಇದೆಲ್ಲ ಏಕೆ ಗೊತ್ತಿಲ್ಲವೆ? ಉದಾರವಾದ ಕೊಡುಗೆಯ ಆಸೆಯಿಂದ ಹೋಗಿ ಬರುತ್ತೇನೆಂದು ಹೇಳಲು ಬಂದ ಅನೇಕರನ್ನು ಕಾರ್ಯದರ್ಶಿ ಅವನಿಗೆ ಪರಿಚಯ ಮಾಡಿಕೊಟ್ಟರು. ಅವರಿಬ್ಬರ ಸುತ್ತ ಒಂದು ಗುಂಪೇ ನೆರೆಯಿತು. ಗುಂಪು ಕರಗಿತು. ಆದರೂ ಕಾರ್ಯದರ್ಶಿಯ ಅತಿ ವಿನಯದ ಮಾತು ಇನ್ನೂ ನಡೆಯುತ್ತಲೇ ಇತ್ತು. ಆಗ ಬಂದಿದ್ದಳು ಹುಡುಗಿ! ಪದ್ಧತಿಯಂತೆ ಕಾರ್ಯದರ್ಶಿ ಪರಸ್ಪರ ಪರಿಚಯವನ್ನು ಮಾಡಿಕೊಟ್ಟ; ಇವರು ಕೇಶವರಾವ್, ಇವರು....! ವಾಕ್ಯ ಪೂರ್ತಿಯಾಗುವ ಮೊದಲೇ ಹುಡುಗಿ ಹಸ್ತವನ್ನೆತ್ತಿ ತಡೆಯ ಸಂಜ್ಞೆ ಮಾಡಿದಳು. ಎಲ್ಲರೂ ಕುತೂಹಲದಿಂದ ನೋಡುತ್ತಿದ್ದಂತೆಯೇ ಅವಳು ಹಾಡಿದಳು. ಸಣ್ಣ ಧ್ವನಿಯಲ್ಲಿ, ಮೂರು ನಾಲ್ಕು ಸೆಕೆಂಡುಗಳ ಕಾಲ ಹಾಡಿದಳು. ಹಾಡು ನಿಲ್ಲಿಸಿದ ಮೇಲೆ ಎಲ್ಲರ ಆಶ್ಚರ್ಯಚಕಿತ ಮುಖಗಳನ್ನೂ ನೋಡಿ ನಕ್ಕಿದ್ದಳು. ಹಿಂದಿನಿಂದ ಯಾರೋ ಅವಳನ್ನು ಕೂಗುತ್ತಲೂ ಹೊರಟುಹೋದಳು. ಚೇತರಿಸಿಕೊಂಡ ಕಾರ್ಯದರ್ಶಿ ವಿವರಿಸಿದ: ಡಾಕ್ಟರ್ ಕೃಷ್ಣಮೂರ್ತಿ ಅವರ ಮಗಳು, ಕಲ್ಯಾಣಿ....! ಡಾಕ್ಟರ್ ಕೃಷ್ಣಮೂರ್ತಿ! ಊರಿನ ಪ್ರಸಿದ್ಧ ವೈದ್ಯ! ಕಾರ್ಯದರ್ಶಿಯಿಂದ ತಪ್ಪಿಸಿಕೊಂಡು ಹೊರಗೆ ಬರುವ ಹೊತ್ತಿಗೆ ಅವಳೂ ಬಂದಳು. ಅವನಿಗೆ ಅವಳ ಪರಿಚಯವನ್ನು ಬೆಳೆಸಬೇಕೆಂಬ ಆಸೆಯಿತ್ತು. ಅವಳೊಡನೆ ಮಾತನ್ನಾಡಿದ. ಗೌರವದಿಂದ (ಅವಳ ತಂದೆ ಪ್ರಸಿದ್ಧ ವೈದ್ಯರು!) ಕೇಳಿದ ಪ್ರಶ್ನೆಗಳಿಗೆ ಉತ್ತರವಿತ್ತಿದ್ದಳು. ಅವಳು ಕಾರನ್ನೇರಿದಾಗ ಮನಸ್ಸಿನಲ್ಲೇ ತಂದೆಯನ್ನು ಬಯ್ದುಕೊಂಡಿದ್ದ. ಅವರು ಕಾರನ್ನು ತೆಗೆದುಕೊಂಡು ಹೋಗದಿದ್ದರೆ

ಅವನೂ ಮನೆಗೆ ಕಾರಿನಲ್ಲೇ ಹೋಗಬಹುದಾಗಿತ್ತು. ಈಗ ಸೈಕಲ್ಲಿನ ಮೇಲೆ ಹೋಗಬೇಕಾಯಿತು....

ಮನಸ್ಸು ಹೊಸದಾಗಿ ಪರಿಚಿತಳಾದ ಹುಡುಗಿಯನ್ನು ಧ್ಯಾನಿಸ ತೊಡಗಿತು. ಡಾಕ್ಟರ್ ಕೃಷ್ಣಮೂರ್ತಿ ತಂದೆಗೆ ಗುರುತಿರಬೇಕು. ಅವರ ವಿಷಯವಾಗಿ ಮೊನ್ನೆ ಮೊನ್ನೆ ತಾ ಏನೋ ಹೇಳುತ್ತಿದ್ದಂತೆ ಜ್ಞಾಪಕ. ಏನು ಹೇಳುತ್ತಿದ್ದರು....? ಓ–ವೈದ್ಯ ಸಮ್ಮೇಳನದಲ್ಲಿ ಅವರು ಓದಿದ ಒಂದು ಲೇಖನವನ್ನು ಪ್ರಶಂಸಿಸಿ ಪತ್ರಿಕೆಗಳಲ್ಲಿ ವರದಿಗಳು ಬಂದಿದ್ದವು. ಆಗ ತಂದೆ ಹೇಳಿದ್ದರು–ಕೃಷ್ಣಮೂರ್ತಿ ಬಹಳ ಯಶಸ್ವಿಯಾದ ವೈದ್ಯ. ಸಂಪಾದನೆ ಚೆನ್ನಾಗಿದೆ. ಅವರ ತಂದೆ ಯಾವುದೋ ದೊಡ್ಡ ಸರಕಾರಿ ಕೆಲಸದಲ್ಲಿದ್ದರಂತೆ. ಮಕ್ಕಳಿಬ್ಬರಿಗೂ ಒಂದೊಂದು ಲಕ್ಷವನ್ನು ಬಿಟ್ಟು ಹೋದರು. ಅಂತವದಂತಿ. ಅರ್ಧ ಲಕ್ಷಕ್ಕೇನೂ ಮೋಸವಿಲ್ಲ....ಇವತ್ತು ಸಂಘಕ್ಕೆ ಬಂದದ್ದು ಒಳ್ಳೆಯದೇ ಆಯಿತು. ಅವಳ ಜೊತೆಗೆ ಇದ್ದವರು ಯಾರು? ಕಾರ್ಯದರ್ಶಿ ಅವರನ್ನು ನನಗೆ ಪರಿಚಯ ಮಾಡಿಕೊಟ್ಟಿದ್ದನಲ್ಲ? ಒಬ್ಬ ಕಲಾವಿದ. ಇನ್ನೊಬ್ಬ ಕವಿ ಅಲ್ಲವೆ? ಅವರ ಹೆಸರುಗಳನ್ನು ಹಿಂದೆಂದೂ ಕೇಳಿದ ಹಾಗೆ ಇರಲಿಲ್ಲವಲ್ಲ? ಇನ್ನೂ ಹೊಸಬರೇನೋ. ಪತ್ರಿಕೆ ನಮ್ಮದು ಅಂತ ಗೊತ್ತಾಗಿ ಪರಿಚಯ ಮಾಡಿಕೊಳ್ಳುವುದಕ್ಕೆ ಬಂದರೇನೋ; ನೋಡೋಣ, ಸ್ವಲ್ಪ ಹೆಸರು ಬರಲಿ....ಸಂಘಕ್ಕೆ ಬಂದದ್ದು ಒಳ್ಳೆಯದೇ ಆಯಿತು. ಅಮ್ಮ ವರ್ಷದಿಂದ ಹೇಳುತ್ತಿದ್ದಾಳೆ: ಇನ್ನೇನು ಓದಿದ್ದೂ ಆಯಿತು, ತಂದೆ ಕೈಕೆಳಗೇ ಕೆಲಸಾನೂ ಮಾಡ್ತಿದ್ದಿಯಾ, ಮದುವೆ ಮಾಡಿಕೋ ಅಂತ. ನಾನೂ ಕಣ್ಣನ್ನೂ ಚುರುಕಾಗೇ ಇಟ್ಟುಕೊಂಡಿದ್ದೇನೆ, ಆದರೂ ಯಾರ ಮೇಲೂ ಇದುವರೆಗೆ ಮನಸ್ಸು ಹೋಗಿರಲಿಲ್ಲ....ಕಲ್ಯಾಣಿ! ಅವಳನ್ನೇ ಯಾಕೆ ಮದುವೆ ಮಾಡಿಕೊಳ್ಳಬಾರದು? ಹುಡುಗಿಗೆ ಅಂತಹ ರೂಪಿಲ್ಲದಿದ್ದರೂ ಲಕ್ಷಣವಾಗಿದ್ದಾಳೆ. ಓದುತ್ತಾ ಇದ್ದಾಳಂತೆ. ಬುದ್ಧಿವಂತೆ. ನನ್ನ ಕೆಲಸದ

ವಿಷಯವನ್ನು ಎಷ್ಟು ಆಸಕ್ತಿಯಿಂದ ಕೇಳುತ್ತಿದ್ದಳು! ಸಂಗೀತ ಕಲಿತಿದ್ದಾಳಂತೆ.... ಸ್ವಲ್ಪ ಜಂಭ ಅಂತ ಕಾಣುತ್ತೆ ಆದರೂ, ಒಳ್ಳೇ ಮನೆತನದ ಹುಡುಗಿ.... ಅವಳಿಗೆ ಹಾಸ್ಯ. ಹುಡುಗಾಟ ಸ್ವಲ್ಪ ಜಾಸ್ತಿ ಅಂತ ಕಾಣುತ್ತೆ, ಮದುವೆಯಾದ ಮೇಲೆ ಗಾಂಭೀರ್ಯ ತಾನಾಗಿಯೇ ಬರುತ್ತೆ. ಒಳ್ಳೇ ಮನೆತನ. ಡಾಕ್ಟರ್ ಕೃಷ್ಣಮೂರ್ತಿ ಯವರ ಮಗಳು ... ನೋಡುವುದಕ್ಕೆ ಅಷ್ಟೇನೂ ಚೆನ್ನಾಗಿಲ್ಲದೆ ಇದ್ದ ರೇನಂತೆ ? ಅಮ್ಮ ತೋರಿಸಿದ ಎಷ್ಟೋ ಹುಡುಗಿಯರು ಇನ್ನೂ ಕೆಟ್ಟ ದಾಗಿರಲಿಲ್ಲವೆ ? ಅಮ್ಮನಿಗೆ ಹೇಳಬೇಕು ಇವಳ ವಿಷಯ. ಇವತ್ತು ಅವಳು ಬಂದಿದ್ದರೆ ಚೆನ್ನಾಗಿರುತ್ತಿತ್ತು... ಆದರೆ ಕಾಗಿಲ್ಲದೆ ಹೇಗೆ ಬರ್ತಾಳೆ ?.... ಹೇಳಬೇಕು ಕಲ್ಯಾಣಿಯ ವಿಷಯ ಹೇಳಲೇಬೇಕು. ಕಲ್ಯಾಣಿ.... ಅಪರೂಪವಾದ ಹೆಸರೇ.... ಕಲ್ಯಾಣಿ....

ಮನೆ ಸಿಕ್ಕಿತು. ಗೇಟನ್ನು ತಳ್ಳಿ ಒಳಗೆ ನಡೆದ. ಚಕ್ರದ ಉರುಳಿನ ಸದ್ದು ಕೇಳಿಸದಷ್ಟು ಜೋರಾಗಿ ಸಿಳ್ಳು ಹಾಕುತ್ತಿದ್ದ.

*

ರಸ್ತೆಯುದ್ದ ಲಾಸ್ಯವಾಡುತ್ತಿದ್ದ ನೆಳಲು, ಬೆಳಕನ್ನು ನೋಡುತ್ತ ನೋಡಿ ಮೆಚ್ಚುತ್ತ, ಹೋಗುತ್ತಿದ್ದ ಮಾಧವ. ತಲೆಗೆ ಸಿಗರೇಟಿನ ಹೊಗೆ ಪ್ರಭಾವಳಿಯನ್ನು ಹೆಣೆದಿತ್ತು. ಜನರಿಲ್ಲದ ರಸ್ತೆ ನೆರಳುಗಳಿಗೆ ವಿಶಾಲವಾದ ರಂಗಸ್ಥಳವಾಗಿತ್ತು. ನಾಟಕಗಳು, ನೃತ್ಯಗಳು ಸುವ್ಯ ವಸ್ಥಿತವಾಗಿ ನಡೆಯುತ್ತಿದ್ದವು. ಮನೋರಂಜನೆಯ ಕಾರ್ಯಕ್ರಮ ವನ್ನು ನೋಡಲು ಕುತೂಹಲದಿಂದ ನಕ್ಷತ್ರಗಳು ಬಾಗಿದ್ದವು, ಎವೆ ಯಿಕ್ಕದೆ ನೋಡುತ್ತಿದ್ದವು. ರಸ್ತೆಯ ಎರಡೂ ಬದಿಗೆ ಇದ್ದ ಬೀದಿಯ ದೀಪಗಳು ಮಾತ್ರ ಅನಾಸಕ್ತಿಯಿಂದ ಆಕಳಿಸುತ್ತಿದ್ದವು. ಅವುಗಳ ನಿದ್ರೆ ತುಂಬಿದ ಕಣ್ಣುಗಳು ಮಂಕಾಗಿದ್ದವು. ಸೈಕಲ್ಲು ವಿಶಾಲವಾದ ರಸ್ತೆಯಿಂದ ಸಣ್ಣದಾರಿಗೆ ಸಾಗಿತು. ದಾರಿ ನೆರಳುಗಳಿಗೆ ಚಿತ್ರ ಬರೆ ಬರೆಯುವ ಹಾಳೆಯಾಗಿತ್ತು, ಬರೆದ ಚಿತ್ರಗಳ ವೈವಿಧ್ಯವನ್ನು

ನೋಡುತ್ತ ಹೋದ ಮಾಧವ. ರಕ್ತಕಣದ ಸೂಕ್ಷ್ಮ ಚಿತ್ರದಿಂದ ಹಿಡಿದು ಬೃಹದಾಕಾರದ ಭಿತ್ತಿ ಚಿತ್ರಗಳವರೆಗೆ ಎಲ್ಲ ತರಹದ, ಎಲ್ಲ ಆಕಾರದ ಚಿತ್ರಗಳೂ ಮೂಡಿದ್ದವು. ಎಲ್ಲಾ ಕಲಾಕೃತಿಗಳ ಚಿತ್ರಗಳೂ ಇದ್ದವು. ರವಿವರ್ಮನಿಂದ ಹಿಡಿದು, ಕ್ಲೀ, ಮಿರೋ ಅಂತಹವರ ವರೆಗಿನ ಎಲ್ಲ ಶೈಲಿಗಳ ಉದಾಹರಣೆಗಳೂ ಇದ್ದವು. ದಾರಿ ಕಲಾವಸ್ತು ಪ್ರದರ್ಶನ ಮಂದಿರವಾಗಿತ್ತು. ಹಿಮದ ಕಣ್ಣಿನ ನಕ್ಷತ್ರಗಳನ್ನು ವಿಮರ್ಶಕರೆಂದು ತಿಳಿದು ಚಿತ್ರಶಾಲೆಯ ಸಂಚಾಲಕರಾದ ಮರಗಳು ಅವುಗಳನ್ನು ಮಂದಿರದಿಂದ ಹೊರಗಿಡಲು ಎಲೆ ತುಂಬಿದ ಕೊಂಬೆಗಳ ತಡೆಗಟ್ಟನ್ನು ಒಡ್ಡಿದ್ದವು.

ವಿಮರ್ಶಕರು ! ಮುಂಬರುವ ತನ್ನ ಚಿತ್ರ ಪ್ರದರ್ಶನಕ್ಕೆ ಏನೇನು ವಿಮರ್ಶೆ ಬರುತ್ತದೋ ? ಸಾಮಾನ್ಯ ದರ್ಜೆಯ, ಸಂಪ್ರದಾಯ ಶೈಲಿಯ ಒಂದೆರಡು ಚಿತ್ರಗಳು ಮಾರಾಟವಾಗುತ್ತವೆ. ನನ್ನ ಮನಸ್ಸಿಗೆ ಪ್ರಿಯವಾದ, ನನಗೆ ಉತ್ತಮವೆಂದು ಎನಿಸಿದ ಚಿತ್ರಗಳು ನನ್ನ ಹತ್ತಿರವೇ ಉಳಿಯುತ್ತವೆ. ಯಾರಿಗೆ ಗೊತ್ತು ? ರಾಘವೇಂದ್ರ ರಾಯರೇ ಒಂದೆರಡು ಚಿತ್ರಗಳನ್ನು ಕೊಳ್ಳಬಹುದು ! ಆದರೆ ಅವುಗಳ ಮೇಲೆ ಸ್ವಲ್ಪ ಧೂಳಿದ್ದರೂ ಅವರ ಮಗ ಅದನ್ನು ಮುಟ್ಟಲಾರ ! ಇಂದು ಸಂಜೆ ಎಷ್ಟು ಗರ್ವದಿಂದ ನಡೆದುಕೊಳ್ಳುತ್ತಿದ್ದ. ಆ ಹುಡುಗಿ ಅವನಿಗೆ ಸರಿಯಾಗಿ ಉತ್ತರವನ್ನು ಕೊಡುತ್ತಿದ್ದಳು. ಅವನ ಬಿಗುಮಾನದ ಪ್ರಶ್ನೆಗಳಿಗೆ ಬೇಕೆಂದು ಗಂಭೀರವಾಗಿ ಉತ್ತರಿಸುತ್ತಿದ್ದಳು. ಆದರೆ ಅವಳ ಕಣ್ಣುಗಳಲ್ಲಿ ನಗು ಕುಣಿಯುತ್ತಿತ್ತು. ಇದನ್ನು ಅವನು ಗಮನಿಸಿರಲಿಲ್ಲವೇನೋ ಏನು ಕಣ್ಣುಗಳು ಅವಳವು ! ಜಗತ್ತಿನಲ್ಲಿರುವ ಎಲ್ಲಾ ತುಂಟತನವನ್ನು ತೇಯ್ದು ಅವಳ ಕಣ್ಣುಗಳಿಗೆ ಕಾಡಿಗೆ ಹಚ್ಚಿದಂತಿತ್ತು. ಕಾರ್ಯಕ್ರಮಗಳು ನಡೆಯುತ್ತಿದ್ದಾಗಲೇ ಅವಳು ಕಣ್ಣಿಗೆ ಬಿದ್ದಿದ್ದಳು. ಆಗೇನು ವಿಶೇಷವಾಗಿ ಆಸಕ್ತಿಯೆನಿಸಿರಲಿಲ್ಲ. ಆ ಮೇಲೆ ಸಂಘದ ಕಾರ್ಯದರ್ಶಿ ಅವಳ ಪರಿಚಯವನ್ನು

ಮಾಡಿಕೊಟ್ಟಾಗ— ಏನವಳು ಹಾಡಿದ್ದು ? ಎಲ್ಲೋ ಕೇಳಿದಂತಿತ್ತು. ನಾವು ಮೂರು, ನಾಲ್ಕು ಜನರನ್ನು ಬಿಟ್ಟು ಇನ್ನು ಯಾರಿಗೂ ಕೇಳಿ ಸದಷ್ಟು ಮೆಲ್ಲಗೆ ಹಾಡಿದ್ದಳು ನಿಜ. ಆದರೂ ಧೈರ್ಯವೇ !.... ಅವಳ ಪರಿಚಯವನ್ನು ಮಾಡಿಕೊಟ್ಟಾಗ ನಮಸ್ಕರಿಸುತ್ತ ಮುಖವೆತ್ತಿದ್ದಳು. ನನ್ನ ಮುಖವನ್ನು ಸಂಧಿಸುತ್ತಲೂ ಅವಳ ಹುಬ್ಬುಗಳು ಸ್ವಲ್ಪ ಮೇಲೇ ರಿದವು. ಬಾಯಿ ಸ್ವಲ್ಪ ತೆರೆಯಿತು. ಮರುಕ್ಷಣವೇ ಕಣ್ಣುಗಳು ಕೆಳಗಾದವು. ಮತ್ತೆ ಮೇಲೆದ್ದವು. ಅವಳನ್ನೇ ನೋಡುತ್ತಿದ್ದ ನನ್ನ ಕಣ್ಣುಗಳಿಗೆ ಅವಳ ಸೂಕ್ಷ್ಮ ಚಲನೆಗಳೆಲ್ಲ ಕಂಡವು. ದೃಷ್ಟಿ ದೃಷ್ಟಿಗೆ ಕೊಂಡಿ ಹಾಕಿತು. ಹಿಂದಿನಿಂದ ಅವಳನ್ನು ಯಾರೋ ಕೂಗದಿದ್ದರೆ ಇನ್ನೂ ಎಷ್ಟು ಹೊತ್ತು ಹಾಗೆಯೇ ನಿಂತಿರುತ್ತಿದ್ದೆವೋ ! ಕಾರ್ಯದರ್ಶಿ ಅವಳ ವಿಷಯವಾಗಿ ವಿವರಗಳನ್ನು ಹೇಳುತ್ತಿದ್ದ. ರಾಘವೇಂದ್ರ ರಾಯರ ಮಗ ವಿಶೇಷ ಆಸಕ್ತಿಯಿಂದ ಕೇಳುತ್ತ ನಿಂತಿದ್ದ ! ನಮ್ಮೊ ಡನೆ ನಿಂತಿದ್ದ ಒಬ್ಬ ಹುಡುಗ— ಪಾಪ, ಶೀರ ಹುಡುಗ. ಅವನು ಕವಿಯೆಂದು ಕಾರ್ಯದರ್ಶಿ ಹೇಳಿದಾಗ ಕೆಂಪೇರಿದ್ದ !— ವಿವರ ಗಳನ್ನು ಕೇಳದೆ ಅವಳು ಹೋದ ಕಡೆಯನ್ನೇ ನೋಡುತ್ತಿದ್ದ. ಅವಳ ಪರಿಚಯವನ್ನು ಹೇಗೆ ಮಾಡಿಕೊಳ್ಳಬಹುದೆಂದು ಯೋಚಿಸುತ್ತಿದ್ದಾಗ ಅವಳು ಬಂದಿದ್ದಳು. ಕಾರಿನಲ್ಲಿ ಕುಳಿತುಕೊಳ್ಳುವವರೆಗೂ ನಮ್ಮೆಲ್ಲ ರೊಡನೆ ಮಾತನಾಡುತ್ತಿದ್ದಳು. ಅವಳ ಸೂಕ್ಷ್ಮವ್ಯಂಗದ ಮಾತು ಗಳನ್ನು ಗುರುತಿಸದೆ ಕೇಶವ ಹಿಗ್ಗುತ್ತಿದ್ದ. "ನಿಮ್ಮ ತಾಯಿ ಏಕೆ ಬರಲಿಲ್ಲ ?" ಎಂದು ಕೇಳಿದ್ದಳು. "ನಮ್ಮ ತಂದೆ ಕಾರನ್ನು ತೆಗೆ ದುಕೊಂಡು ಹೊರಟುಹೋಗಿದ್ದರು," ಎಂದು ಉತ್ತರ ಕೊಟ್ಟಿದ್ದ. 'ಓ ನಿಜ. ಪಾಪ, ಕಾರಿಲ್ಲದೆ ಹೇಗೆ ಬರಲು ಸಾಧ್ಯ ?' ಎಂದಿದ್ದಳು. "ಹೌದು," ಎಂದಿದ್ದ ಅವನು ! ಆ ಹುಡುಗ— ಕಾಲೇಜಿನ ವಿದ್ಯಾ ರ್ಥಿಯಂತೆ ಅವನಿನ್ನೂ— ಅವಳನ್ನು ಏನೂ ಮಾತನ್ನಾಡಿಸಿರಲಿಲ್ಲ. ಅವಳೇ ಅವನನ್ನು ಒಂದೆರಡು ಬಾರಿ ಮಾತನ್ನಾಡಿಸಿದ್ದಳು. ಉತ್ತರ ಕೊಡುವಾಗ ಹುಡುಗ ತಬ್ಬಿಬ್ಬಾಗಿದ್ದ. ಆದರೆ ಅವಳ ಕಣ್ಣಿನಲ್ಲಿ

ವ್ಯಂಗ್ಯ ಹಾಸ್ಯ ಇರಲಿಲ್ಲ. ನನ್ನ ಕಡೆಗೆ ನೋಡಿದಾಗಲೂ ಇರಲಿಲ್ಲ. ಹೆಂಗಸರು– ಹುಡುಗರು– ನನ್ನ ಕಡೆಗೆ ನೋಡುವಂತೆಯೇ ನೋಡಿದ್ದಳು. ಆದರೆ ಅದರೊಡನೆ ಧೃಢವ್ಯಕ್ತಿತ್ವದ ವಿಶಿಷ್ಟವಾದ ಕಳೆಯೊಂದು ಬೆರೆತಿತ್ತು. ಸ್ನೇಹದೊಂದಿಗೆ ಪ್ರತಿಭಟನೆ, ಸಲಿಗೆಯೊಂದಿಗೆ ಪ್ರತ್ಯೇಕತೆ ಕೂಡಿದ್ದವು. ಅಪಾರವಾದ ಆತ್ಮಾಭಿಮಾನ ಅವಳಲ್ಲಿರಬೇಕು. ಆ ಅಭಿಮಾನ ಅಕಾರಣವಾದುದಲ್ಲವೆಂದು ಕಾಣುತ್ತದೆ. ಕೇಶವನಿಗೆ ಅವಳು ಕೊಟ್ಟ ಉತ್ತರಗಳೇ ಸಾಕು !.... ನನ್ನ ಚಿತ್ರಗಳನ್ನು ಒಮ್ಮೆ ಅವಳಿಗೆ ತೋರಿಸಬೇಕು. ಏನನ್ನುತ್ತಾಳೋ ? ತೋರಿಸೆಂದು ಕೇಳಿದ್ದಳಲ್ಲವೆ ? ನಿಜವಾಗಿ ಆಸಕ್ತಿಯಿಟ್ಟು ಕೇಳಿದಳೋ ಅಥವಾ ಕೇವಲ ಉಪಚಾರಕ್ಕಾಗಿ ಕೇಳಿದಳೋ ? ಅವಳ ನಿಕಟ ಪರಿಚಯವಾದ ಹೊರತೂ ಈ ಪ್ರಶ್ನೆಗೆ ಉತ್ತರ ಸಿಗದು.... ಕಲ್ಯಾಣಿ ನನ್ನ ಒಂದೆರಡು ಚಿತ್ರಗಳಿಗೆ ಮಾದರಿಯಾಗಿ ಭಂಗಿಗಳನ್ನು ಕೊಟ್ಟರೆ! ಕೊಡಬಹುದೆ ? ಅವಳು ಒಪ್ಪಿದರೂ ಅವಳ ಮನೆಯವರು ? ಹೌಹಾರುತ್ತಾರೆ. ನನ್ನನ್ನು ಹೊರಗೆ ಹಾಕುತ್ತಾರೆ. ಅಷ್ಟೆ ! ಎಂತಹ ಭಾವಪ್ರದರ್ಶನ ಮುಖ! ಉತ್ತಮ ಅಭಿನೇತ್ರಿಯಾಗಬಲ್ಲವಳು ಅವಳು. ಬಾಯಿ, ಕಣ್ಣು, ಹುಬ್ಬು ಎಲ್ಲ ಎಷ್ಟು ಭಾವವ್ಯಂಜಕವಾಗಿವೆ. ಅವಳಿಗೆ ಗ್ರೀಕರ ಉಡುಪನ್ನು ಹಾಕಿ ಚಿತ್ರಿಸಬಹುದಾದರೆ ! ಗ್ರೀಕ್ ಹೆಣ್ಣು. ನಿಜ. ಲಾರ್ಡ್ ಲೇಟನ್ನನ ಹೆಲೆನಳಿಗೂ ಇವಳಿಗೂ ಹೋಲಿಕೆ ಇದೆ. ಏನೇನು ಪಾತ್ರಗಳಿಗೆ ಮಾದರಿಯಾಗಬಹುದು ಅವಳು !-- ಎಲೆಕ್ಟ್ರಾ, ಆಂಟಿಗೊನೆ.... ಏನೇನು ಭಾವಗಳಿಗೆ ಜೀವ ಕೊಡಬಹುದು— ಎಲ್ಲ ಭಾವಗಳಿಗೂ !.. ಚಿತ್ರಗಳನ್ನು ತೋರಿಸಬೇಕು. ಅವಳಿಗೆ ಆಸಕ್ತಿಯಿಲ್ಲದಿರಲಾರದು ನನ್ನನ್ನು ಗುರುತಿಸಿದ ಸಂಗತಿಯನ್ನು ಕಣ್ಣು ಹೇಳಿರಲಿಲ್ಲವೆ?....

ಅವನ ಕೋಣೆಯಿದ್ದ ದೊಡ್ಡ ಕಟ್ಟಡ ಎದುರಿಗೆ ಬಂದು ನಿಂತಿತು. ಸಿಗರೇಟಿನ ತುಂಡನ್ನು ಬಿಸುಟು, ಸೈಕಲ್ಲಿನಿಂದ ಕೆಳಗಿ

ಳಿದು ಒಳಗೆ ನಡೆದ. ಹೊಸ ಉತ್ಸಾಹದಿಂದ ನಡಿಗೆ ಹಗುರವಾಗಿತ್ತು.

* * * *

ಮನಸ್ಸಿಗೆ ಹೊಸದಾಗಿ ಬಂದು ಸೇರಿದ್ದ ಭಾವನೆಯನ್ನು ರಾತ್ರಿಯ ತಂಪಿಗೆ ನಾಚಿಕೆಯಿಂದ ನಿವೇದಿಸುತ್ತ ಹೋಗುತ್ತಿದ್ದ ಗೋಪಾಲ. ಹಾಸ್ಟೆಲ್ಲಿಗೆ ತಡವಾಯಿತು ಎನ್ನುವ ಪ್ರಜ್ಞೆ ಅವನಲ್ಲಿರಲಿಲ್ಲ. ಪರೀಕ್ಷೆ ಹತ್ತಿರ ಬಂತು ಎನ್ನುವ ಚಿಂತೆ ಅವನನ್ನು ಬಾಧಿಸುತ್ತಿರಲಿಲ್ಲ. ಅವನು ಚೇತನದಲ್ಲಿದ್ದುದು ಕೇವಲ ತಂಪು ನೀಲಿಮೆಯ ಸರಸ್ಸಿನಲ್ಲಿ ನಗುತ್ತಿದ್ದ ನಕ್ಷತ್ರ ನೈದಿಲೆಗಳು ಮತ್ತು ಅವುಗಳ ಮಧ್ಯೆ ವಿರಾಜಮಾನಳಾಗಿ ಮಂಡಿತಳಾಗಿದ್ದ ಸುಂದರಿ. ಆಕಾಶವನ್ನೇ ದಿಟ್ಟಿಸುತ್ತಿದ್ದ ತಲೆಗೆ ಕೆಳಗಿನ ರಸ್ತೆಯ ಅರಿವೇ ಇರಲಿಲ್ಲ. ಸೈಕಲ್ಲು ಅಭ್ಯಾಸ ಬಲದಿಂದ ಹಾಸ್ಟೆಲ್ಲಿನ ದಾರಿಯಲ್ಲಿ ಸಾಗುತ್ತಿತ್ತು. ಮೋಡ ತುಂಬಿದ ಆಕಾಶ. ಹಂಸತೂಲಿಕಾತಲ್ಪದಲ್ಲಿ ಸುಖಾಸೀನನಾಗಿದ್ದ ದೊರೆ ಚಂದ್ರ. ಅವನ ಸುತ್ತಲೂ ವಿಲಾಸಿನಿ ತಾರೆಯರು ಬೀಸಣಿಗೆಗಳನ್ನು ಹಿಡಿದು ನಿಂತಿದ್ದರು. ಚಂದ್ರನ ಹತ್ತಿರದ ಮೋಡಗಳ ಅಂಚಿಗೆ ಮುತ್ತಿನ ಝಲ್ಲರಿಗಳನ್ನು ಕಟ್ಟಲಾಗಿತ್ತು. ವೈಭವಾಲಂಕೃತವಾದ ಮಂಚ ಚಂದ್ರನದು. ಮೋಡ ಚದುರಿತು. ಚಂದ್ರನ ಸುತ್ತಲೂ ಬೆಳ್ಳಿ ಚುಕ್ಕೆಗಳ ಪ್ರಭಾವಳಿ ಕಾಣಿಸಿಕೊಂಡಿತು. ತುರುಬಿಗೆ ತೊಡಿಸಿದ ಮಲ್ಲಿಗೆ ಮಾಲೆ. ಮಧ್ಯೆ ಜಡೆಬಿಲ್ಲೆ. ನಕ್ಷತ್ರ ಮಾಲೆ ಸುರಸುಂದರಿಗೆ, ಬಾಳ ಹಾದಿಯುದ್ದ ಶೀತಲವಾದ ಬೆಳಕನ್ನು ಚೆಲ್ಲುವ ಚೆಲುವೆಗೆ ಮುಖ ಚಂದ್ರ. ಅದರಲ್ಲಿನ ಕಪ್ಪು ಹಣೆಯ ಮೇಲೆ ಅಲೆದಾಡುತ್ತಿದ್ದ ಎರಡು ಮುಂಗುರುಳುಗಳು. ತಾರಾಸಮೂಹ ಮಣಿಗಳಾಗಿ, ಚಂದ್ರ ಪದಕವಾಗ, ಒಲವು ಸೂತ್ರವಾಗಿ ರಚಿಸಿದ ಹಾರ ಪ್ರೇಯಸಿಗೆ ಅರ್ಪಣೆ. ಅವಳು ಧರಿಸಿದ್ದರಿಂದ ಹಾರದ ಸೊಬಗು ಇಮ್ಮಡಿಸುತ್ತದೆ,

ಕುಶಲ ಕ್ರಿಯಿನ ಹಾರವಲ್ಲವೆಂದು ನಿರಾಕರಿಸುವುದಿಲ್ಲವಷ್ಟೆ ಕಲ್ಯಾಣಿ ? ಇಲ್ಲ ಅಂತಹ ಕ್ರೌರ್ಯ ಅವಳಿಗೆ ಹೊರತು. ಮಾರ್ದವ ತುಂಬಿದ ಅವಳ ಕಣ್ಣುಗಳು, ತೀವ್ರಾಸಕ್ತಿಯನ್ನು ಪ್ರದರ್ಶಿಸುತ್ತಿದ್ದ ಅವಳ ಮಾತುಗಳು ಇನ್ನೂ ನೆನಪಿನಲ್ಲಿವೆ. ಅವಳ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡುವಷ್ಟು ಆತ್ಮ ಪ್ರಜ್ಞೆ ಸಹ ನನ್ನಲ್ಲಿ ಇಲ್ಲವಾಯ್ತಲ್ಲ. ಆ ಕಲಾವಿದ–ಏನವನ ಹೆಸರು ? ಮಾಧವ ?— ಅವನು ಅವಳ ಜೊತೆಜೊತೆಗೆ ಎಷ್ಟು ಚೆನ್ನಾಗಿ ಮಾತನ್ನಾಡುತ್ತಿದ್ದ. ಆದರೇನು ? ನನ್ನ ಕಡೆಗೆ ನೋಡಿದಂತೆ ಅವಳು ಅವನ ಕಡೆಗೆ ನೋಡಲಿಲ್ಲ. ಪರಿಚಯ ಮಾಡಿಕೊಟ್ಟ ಕೂಡಲೆ— ಕಾರ್ಯದರ್ಶಿ ಅವಳ ಹೆಸರನ್ನು ಹೇಳುವಷ್ಟರಲ್ಲಿಯೇ, ಕಲ್ಯಾಣಿ ರಾಗದ ಆಲಾಪನೆ ಮಾಡಿದಳಲ್ಲ. ಎಷ್ಟು ಚನ್ನಾಗಿ ಹಾಡಿದಳು— ಪರಿಚಯವಾದ ಕೂಡಲೆ ಎಷ್ಟು ಆಸಕ್ತಿಯಿಂದ ಮಾತನ್ನಾಡಿಸಿದಳು. ಕಾರ್ಯಕ್ರಮದ ಮೊದಲಿಗೇ ಅವಳ ಪರಿಚಯವಾಗಬಾರದಾಗಿತ್ತೆ ? ಕಡೆಯಲ್ಲಿ ತೀರ ಸ್ವಲ್ಪ ಹೊತ್ತು ಅವಳ ಸಹವಾಸ ಲಭಿಸಿತು. ಕಾರ್ಯದರ್ಶಿ ಸಂಘದಲ್ಲಿ ಒಮ್ಮೆ ಕವಿತಾವಾಚನವನ್ನು ಮಾಡಬೇಕಾಗಿ ಕೇಳಿಕೊಂಡರು. ಅವರಿಗೆ ಹೇಗೆ ತಿಳಿಯಿತು ? ಕಲ್ಯಾಣಿ ಪರಿಚಯವಾದ ಕೂಡಲೇ ಹೇಳಲಿಲ್ಲವೆ. ನಿಮ್ಮನ್ನು ನೋಡಿದಾಗಲೇ ನೀವು ಕವಿಯಿರಬೇಕೆಂದು ಅಂದುಕೊಂಡೆ ! ಎಷ್ಟು ಮೆಚ್ಚುಗೆಯಿತ್ತು ಮಾತಿನಲ್ಲಿ ! ಸೈಕಲ್ಲು ಕಲ್ಲನ್ನೆಡವಿತು. ರಸ್ತೆಯ ಕಡೆಗೆ ನೋಡಿದ. ರಸ್ತೆಗೆ ಬಕುಲಪುಷ್ಪದ ಹೊದಿಕೆ ಹಾಸಿದಂತೆ ಬೆಳ್ದಿಂಗಳು ಬಿದ್ದಿತ್ತು ಬೆಳದಿಂಗಳು ಸಂಗೀತದಂತೆ ಹರಡಿತ್ತು, ಸಹಾನುಭೂತಿಯಂತೆ ಹರಡಿತ್ತು. ರಸ್ತೆಯಮೇಲೆ ಅಲ್ಲಲ್ಲಿ ಮರದೆಲೆಗಳ ನೆರಳು ಮೂಡಿತ್ತು. ರಸ್ತೆ ಒತ್ತಾಗಿ ಬಿಳಿ ಹೂ ಬಿಟ್ಟ ಗಿಡಗಳ ಗುಂಪಿನಂತೆ ಕಾಣುತಿತ್ತು, ಕನ್ನಡಿ ದಿಲೆಗಳಿಂದ ತುಂಬಿದ್ದ ಸರೋವರದಂತೆ ಕಾಣುತ್ತಿತ್ತು. ಮತ್ತೆ ತಲೆಯೆತ್ತಿದ. ಆಕಾಶದ ತುಂಬ ಬಳ್ಳಿ ಮೋಡಗಳು ಹಬ್ಬಿದ್ದವು. ಆಕಾಶ ಲತಾಕುಂಜ.

ಚಂದ್ರ ಶಕುಂತಲೆ. ಬಳಿಯ ಎರಡು ನಕ್ಷತ್ರಗಳು ಅನುಸೂಯೆ, ಪ್ರಿಯಂವದೆಯರು....

ಇದ್ದಕ್ಕಿದ್ದಂತೆ ಸೈಕಲ್ಲು ನಿಂತಿತು. ಕಣ್ಣು ಆಕಾಶವನ್ನು ಬಿಟ್ಟು ಬಂದಿತು. ಎದುರಿಗೆ ಹಾಸ್ಟೆಲ್ಲಿನ ಕಟ್ಟಡ ಕಂಡಿತು. ಕನಸಿನ ಹಗುರವಾದ ಭಾರವನ್ನು ಹೊತ್ತು ಒಳಗೆ ನಡೆದ.

ದಣಿದ ದೇಹ ಕಾರಿನ ಸುಪ್ಪತ್ತಿಗೆಯನ್ನೊರಗಿತ್ತು. ವಿಜಯೋತ್ಸಾಹಿ ಮನಸ್ಸು ಗುಣಿಸತೊಡಗಿತ್ತು. ಎಣಿಸತೊಡಗಿತ್ತು, ಸಂಜೆಯ ಘಟನೆಗಳನ್ನು ಮೆಲಕು ಹಾಕತೊಡಗಿತ್ತು.

ಪ್ರಪಂಚದಲ್ಲಿರುವ ಗಂಡಸರನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಹಸಿರು ಗ್ಯಾಬರ್ಡೀನ್ ಶರಾಯಿಯನ್ನು ಹಾಕಿಕೊಳ್ಳುವವರು, ಚಾಕಲೇಟು ಬಣ್ಣದ ಟ್ವೀಡ್ ಶರಾಯಿಗಳನ್ನು ಹಾಕಿಕೊಳ್ಳುವವರು, ಮತ್ತು ಬೂದು ಬಣ್ಣದ ಫ್ಲಾನಲ್ ಶರಾಯಿಗಳನ್ನು ಹಾಕಿಕೊಳ್ಳುವವರು ! ಮೂರು ಪಂಗಡಗಳಿಗೂ ಅವುಗಳದ್ದೇ ಆದ ವೈಶಿಷ್ಟ್ಯಗಳಿರುತ್ತವೆ. ಇಂದು ಮೂರು ಗುಂಪಿನ ಪ್ರತಿನಿಧಿಗಳ ಪರಿಚಯವೂ ಆಗಿತ್ತು ! ಪರಿಚಯವಾದಾಗಲೇ ಅವರು ಮೂವರ ಸ್ವಭಾವಗಳನ್ನೂ ಗುರುತಿಸಲು ಸಾಧ್ಯವಾಗಿತ್ತು. ತಮಾಷೆಗಾಗಿ, ತನ್ನ ಹೆಸರನ್ನು ಸೂಚಿಸುವದಕ್ಕಾಗಿ ಹಾಡಿದ ಸನ್ನಿವೇಶ ! ಕೇಶವ ಅನಿರೀಕ್ಷಿತ ಘಟನೆಯಿಂದ ಬೆಚ್ಚಿದ್ದ. ಅನಿರೀಕ್ಷಿತ ಘಟನೆಗಳೆಲ್ಲವೂ ಈ ಪಂಗಡದವರಿಗೆ ಅಪ್ರಿಯ. ಸಂಪ್ರದಾಯ ಬದ್ಧವಲ್ಲದ ಸನ್ನಿವೇಶ ಮಾಧವನನ್ನು ಆಕರ್ಷಿಸಿತ್ತು. ಈ ಗುಂಪಿನವರಿಗೆ ಹೊಸ ವಸ್ತುಗಳು, ವ್ಯಕ್ತಿಗಳ ವ್ಯಾಮೋಹ ಹೆಚ್ಚು. ಗೋಪಾಲನಿಗೆ ಸನ್ನಿವೇಶದ ನವೀನತೆ, ಸ್ವತಂತ್ರತೆಗಳ ಅರಿವು ಕೂಡ ಇರಲಿಲ್ಲವೇನೋ. ಅವನು ಗಾನಕ್ಕೆ ಮರುಳಾಗಿದ್ದ, ಕನಸಿನಲ್ಲಿ ಲೀನವಾಗಿದ್ದ. ವಾಸ್ತವಕ್ಕೆ ದೂರವಾದ

ಕನಸಿನ ಗೂಡಿನಲ್ಲಿ ಚಿಲಿಪಿಲಿಗುಟ್ಟುವ ಹಕ್ಕಿ ಮರಿಗಳ ಗುಂಪಿಗೆ ಇವನು ಒಳ್ಳೆಯ ಪ್ರತಿನಿಧಿ.

ತಂದೆಯ ಹೆಸರನ್ನು ಕೇಳುತ್ತಲೂ ಕೇಶವನ ಕಣ್ಣುಗಳಿಗೆ ಬೆಳಕು ಬಂದಿದ್ದುವು. ನನ್ನನ್ನು ವಿಶೇಷ ಗೌರವದಿಂದ ಮಾತನಾಡಿಸಿದ್ದ. ನನಗೆ ಗೊತ್ತು. ತಂದೆಯ ವೈದ್ಯಕೀಯ ವೃತ್ತಿ, ಅವರ ಸಂಪಾದನೆ ಇವುಗಳ ವಿಷಯವಾಗಿ ಯೋಚಿಸುತ್ತಿತ್ತು ಅವನ ಮನಸ್ಸು. ಅವನ ಮನಸ್ಸು ಇನ್ನೂ ಮುಂದುವರಿಯಬಹುದು— ಏನೇನನ್ನೋ ಯೋಚಿಸಬಹುದು. ಯೋಚಿಸಲಿ. ನನ್ನ ಉತ್ತರದ ಪದಗಳನ್ನು ಮಾತ್ರ ಅರಿತು ಧಾಟಿಯನ್ನು ಗುರುತಿಸಲಾರದೆ ಹೋದವನ ಯೋಚನೆಗಳೆಲ್ಲ ಅಡ್ಡಗೋಡೆಯ ಮಗ್ಗುಲಿಗೇ ಅಂತ್ಯವಾಗುತ್ತವೆ. ಧಾಟಿಯನ್ನು ಗುರುತಿಸಿದ್ದು ಮಾಧವನೊಬ್ಬನೇ. ಅವನ ತುಟಿಗಳ ಮೇಲೆ ತೇಲಿ ಬರುತ್ತಿದ್ದ ವಂಕಿವಂಕಿ ನಗೆಯೇ ಇದಕ್ಕೆ ಸಾಕ್ಷಿ. ಅವನ ಚಿತ್ರಗಳನ್ನು ನೋಡಬೇಕು. ಆದರೆ ಅವನೇನೂ ತೋರಿಸಲು ಆತುರಪಟ್ಟಂತೆ ಕಾಣಲಿಲ್ಲ. ಅದೂ ಅಲ್ಲದೆ ಚಿತ್ರಗಳು ನನಗೆ ಅರ್ಥವಾಗುತ್ತವೋ ಇಲ್ಲವೋ ? ಆಗುವುದಿಲ್ಲವೆಂದೇ ಅವನ ಅಭಿಪ್ರಾಯವೆಂದು ಕಾಣುತ್ತದೆ. ಇದಕ್ಕಾಗಿಯಾದರೂ ನೋಡಲೇಬೇಕು. ಗೋಪಾಲನ ಕವನಗಳನ್ನು ಒಮ್ಮೆ ಕೇಳಬೇಕು ಎಂದಿದ್ದಕ್ಕೇ ಅವನಿಗೆ ಎಷ್ಟು ಆನಂದವಾಗಿತ್ತು ! ನಾನು ಸೂಚನೆ ಕೊಡುವುದೇ ತಡ, ಕಾವ್ಯವಾಚನ ಪ್ರಾರಂಭವಾಗುತ್ತದೆ. ಆದ್ದರಿಂದಲೇ ನಾನು ಕೇಳುವುದಿಲ್ಲ.

ಕೇಶವ ಕೆಟ್ಟವನೆಂದಲ್ಲ. ಒಂದೇ ಮಾರ್ಗದಲ್ಲಿ— ತಂದೆ ತೋರಿಸಿಕೊಟ್ಟ ಮಾರ್ಗದಲ್ಲಿ— ನಡೆದ ಅವನಿಗೆ ಬೇರೆ ಮಾರ್ಗಗಳು ಮಾರ್ಗಗಳೇ ಅಲ್ಲ ಎನ್ನುವ ಅಭಿಪ್ರಾಯ ಬಂದಿದೆ ಅಷ್ಟೆ. ಅವನ ಬುದ್ಧಿ ಬಲಿತಿದೆಯಾದರೂ ಹೃದಯ ಎಳೆಯದು. ಮಾಧವ ಯೋಚನಾಶಾಲಿ, ಅನುಭವಿ. ಅವನ ಬುದ್ಧಿ, ಹೃದಯ ಎರಡಕ್ಕೂ ವಯಸ್ಸಾಗಿದೆ. ಗೋಪಾಲನಿಗೆ ಎರಡೂ ಎಳೆಯವು. ಅವನ ಹೃದಯದಲ್ಲಿ

ಇನ್ನೂ ನರಿ ಕಾಣಿಸಿಕೊಂಡಿಲ್ಲ. ಕೇಶವ ವ್ಯಾಪಾರ, ಉದ್ಯಮಗಳಲ್ಲಿ ಅನುಭವಿ. ಲೌಕಿಕ ವ್ಯವಹಾರಗಳಲ್ಲಿ ಜಾಣ್ಮೆಯಿದೆ, ಮಾಧವನಿಗೆ ಇರುವದಕ್ಕಿಂತ ಹೆಚ್ಚಿನ ಕುಶಲತೆಯಿದೆ. ಆದರೆ ಪ್ರಾಪಂಚಿಕ ಮನಸ್ಸಿಗೆ ಬೇಕಾದ ಪರಿಜ್ಞಾನವಿದ್ದರೂ, ಅವನಿಗೆ ವಸ್ತುಗಳ ಮೌಲ್ಯವನ್ನು ಹೊನ್ನಿನ, ಅಧಿಕಾರದ ಪರಿಮಾಣಗಳಿಂದ ಅಳೆಯುವ ಸಾಮಾನ್ಯವಾದ ಅವಿವೇಕವೇ ಅವನಲ್ಲೂ ಇದೆ. ಐಶ್ವರ್ಯದಿಂದ ಆನಂದ, ಆದ್ದರಿಂದ ಐಶ್ವರ್ಯಸಾಧನೆ ಜೀವನದ ಧ್ಯೇಯ ಎಂಬ ಜನಪ್ರಿಯ ತಿಳಿವಳಿಕೆಯನ್ನೇ ಅವನೂ ಹಿಂಬಾಲಿಸುತ್ತಾನೆ. ಅಂತ್ಯ ಮುಖ್ಯ, ಧ್ಯೇಯ ಸಾಧನೆ ಮುಖ್ಯ, ಯಾವ ದಾರಿಯಲ್ಲಿ ಹೋದರೇನು ಎಂದು ವಾದಿಸಿ ಪ್ರಯಾಣ ಬೆಳೆಸುತ್ತಾನೆ. ತನಗೆ ಅನುರೂಪಳಾದ, ಸಹಾಯಕಳಾದ ಹೆಂಡತಿಯನ್ನು ಹುಡುಕುತ್ತಾನೆ. ಸಿಕ್ಕಿದರೆ— ಅಂತಹವರು ಸಿಕ್ಕುವುದು ಅತಿ ಸುಲಭ— ಅವನು ಸಂಪೂರ್ಣವಾಗಿ ತೃಪ್ತ, ಸುಖಿ, ಆಸ್ತಿಯನ್ನು ಗಳಿಸುತಾನೆ, ಬೆಳೆಸುತ್ತಾನೆ. ರಾಜಕೀಯ ರಂಗದತ್ತವೂ ಅವನು ಕಣ್ಣು ಹಾಯಿಸಬಹುದು. ರಾಜಕೀಯದಲ್ಲಿ ಇವನು ಸಂಪ್ರದಾಯವಾದಿ. ಅನೇಕ ಕ್ಲಬ್ಬುಗಳ ಜೊತೆಗೆ ಸಂಸ್ಥಾನದ ಅಸೆಂಬ್ಲಿಯ ಸದಸ್ಯನೂ ಆಗಬಹುದು. ಸಮಾಜದಲ್ಲಿ ಅಪಾರ ಗೌರವವನ್ನು ತಾನೂ, ತನ್ನ ಮನೆಯವರೂ ಖಚಿತವಾಗಿ ಪಡೆಯುವಂತೆ ನೋಡಿಕೊಳ್ಳುತ್ತಾನೆ. ನಯವಿಲ್ಲದ, ನಿರ್ದಾಕ್ಷಿಣ್ಯವಾದ, ಹುರುಪಿನ ಸ್ವಭಾವ ಆರೋಗ್ಯಶಾಲಿ. ಆಟಗಳಲ್ಲಿ ಅವನಿಗೆ ವಿಶೇಷವಾದ ಆಸಕ್ತಿ. ಜೀವನವನ್ನು ಅನುಭೋಗಿಸಲು ಬಲ್ಲವನಾದರೂ ಸರ್ವಜ್ಞನಲ್ಲ. ಕಲೆಗೂ ಗಂಡಸಿಗೂ ಏನೂ ಸಂಬಂಧವಿಲ್ಲ. ಇರಕೂಡದು ಎನ್ನುವ ಮನೋಭಾವ ಅವನದು. ತನಗೆ ಸಂಬಂಧವಿಲ್ಲದ ಜನರ, ವಸ್ತುಗಳ ವಿಷಯವಾಗಿ ಅವನು ಎಂದೂ ಯೋಚಿಸುವುದಿಲ್ಲ. ತಾನು ಸಂಪಾದಿಸಿದ ವಸ್ತುಗಳ ಬಗ್ಗೆ ತೀವ್ರಾಭಿಮಾನ, ತನ್ನ ಸ್ವಾಮಿತ್ವದಲ್ಲಿರುವ ವ್ಯಕ್ತಿಗಳ— ಹೆಂಡತಿ ಮಕ್ಕಳು ಇತ್ಯಾದಿ— ಬಗ್ಗೆ ಅಸ್ಫುಟ ವಾತ್ಸಲ್ಯ.

ಕೆಟ್ಟವನು ಎನ್ನಲಾಗಿದ್ದರೂ ಒಳ್ಳೆಯವನೆನ್ನಲಾಗದು. ಒಂದು ಮಾತಿನಲ್ಲಿ ಹೇಳುವುದಾದರೆ ಬ್ಯಾಬಿಟ್.

ಮಾಧವ— ಮಾಧವ. ಚಿತ್ತಾಕರ್ಷಕ ವ್ಯಕ್ತಿ. ಉದ್ದೇಶಪೂರ್ವಕವಾಗಿ ಸೊರಗಿಸಿದ ಪೇಹದಿಂದ ಮೊದಲುಗೊಂಡು, ನಿಸ್ಸಂದೇಹವಾಗಿ ಕೃತ್ರಿಮವಾದ ಮಾತು, ನಡೆವಳಿಕೆಗಳವರೆಗೆ ಎಲ್ಲವೂ ಬಲು ಆಕರ್ಷಕ. ಇದರ ಸತ್ಯಾಂಶ ಅವನಿಗೂ ಗೊತ್ತು. ಆದರೆ ಅದನ್ನು ದುರುಪಯೋಗಿಸಿಕೊಳ್ಳುವ ನೀಚತನ ಅವನದಲ್ಲ. ( ಇವನು ಸ್ವಲ್ಪ ನಿರ್ಲಕ್ಷನಾದರೆ, ಸ್ವಲ್ಪ ಕೆಳಗಿನಮಟ್ಟಕ್ಕೆ ಹೋದರೆ, ಶರಾಯಿಗಳ ತುದಿಗಳನ್ನು ಕಾಲಿನ ಹರಡಿನಿಂದ ಸ್ವಲ್ಪ ಮೇಲೆತ್ತಿ, ಮಡಿಸಿ, ಬಣ್ಣ ಬಣ್ಣದ ಅಚ್ಚಿನ ಬುಶ್ ಕೋಟುಗಳನ್ನೋ ದೊಡ್ಡ ಚೌಕಳಿಯ ಶರ್ಟುಗಳನ್ನೋ ಹಾಕುತ್ತಾನೆ ). ಲೌಕಿಕ ಯಶಸ್ಸಿನ ಕ್ಷಣಿಕ ಅಸ್ತಿತ್ವವನ್ನು ಅರಿತವನಾದ್ದರಿಂದ ಅವನು ಅವುಗಳನ್ನು ಹಿಂಬಾಲಿಸುವುದಿಲ್ಲ.ಮನಸ್ಸು ಮಾಡಿದರೆ ಯಶಸ್ಸು ಅವನದಾಗುತ್ತದೆ. ಆದರೆ, ಅವನ ನಿರ್ಲಿಪ್ತ ಮನಸ್ಸಿಗೆ ಇವು ಯಾವುದೂ ಬೇಡ. ಅವನ ನಿರಸ–ನಿಪ್ರವೃತ್ತಿ, ತಿರಸ್ಕಾರ, ಕಠಿಣತೆ, ಅವೇಧನೀಯತೆ, ಧೃಡತೆ, ಕಹಿಯಾದ, ಹರಿತವಾದ ಸಂಭಾಷಣೆ ಇವೆಲ್ಲ ವಿಕರ್ಷಕ ಎಂದೆನಿಸಬಹುದಾದರೂ ನಿಜವಾಗಿ-ಅದರಲ್ಲೂ ಅನುಭವಿ ತರುಣ ತರುಣಿಯರಿಗೆ-- ಬಹು ಆಕರ್ಷಕ. ಕಲೆಯ ಬಗೆಗೆ ಉತ್ಕಟಾಭಿಮಾನವಿದ್ದರೂ, ಬೀದಿಯ ದೇವಸ್ಥಾನದಲ್ಲಿ ಕಲ್ಲಿಗೆ ಹೂವೇರಿಸಿ, ಗಂಟೆ ಹೊಡೆಯುವ ಪದ್ಧತಿ ಅವನಿಗೆ ಸೇರದು. ಕಟುವಾದ ವಿಮರ್ಶೆಗಳಿಂದ ಮನನೊಂದರೂ ವಿಮರ್ಶಕರ ಬಗ್ಗೆ ಆಳವಾದ ತಿರಸ್ಕಾರವನ್ನು ಹೊಂದಿರುತ್ತಾನೆ. ಹಣದ ಬಗೆಗೆ ಇವನಿಗೆ ಕೇಶವನಿಗೆ ಇರುವಂತೆ ಆರಾಧನಾ ಭಾವವೂ ಇಲ್ಲ, ಗೋಪಾಲನಿಗೆ ಇರುವಂತೆ-, ಅಥವಾ ಘೋಷಿಸುವಂತೆ-- ಉತ್ಕಟ ತಿರಸ್ಕಾರವೂ ಇಲ್ಲ. ಪ್ರಪಂಚದಲ್ಲಿ ಬಾಳಲು ಅದು ಅವಶ್ಯಕ ಎಂಬ ಅರಿವಿರುವುದರಿಂದ ಅದನ್ನು ಉಪೇಕ್ಷಿಸದಿದ್ದರೂ ಒಂದು ವಿಧದ

ನಿರ್ಲಕ್ಷ್ಯತೆ ಇದೆ. ತನಗೆ ಏನೂ ಆದರ್ಶಗಳಿಲ್ಲ, ತಾನು ವಾಸ್ತವ ವಾದಿ ಎಂದು ತಿಳಿದುಕೊಂಡಿದ್ದರೂ ಅವನಿಗೆ ಅರಿವಿಲ್ಲದಂತೆಯೇ, ಅಥವಾ ಅಸ್ಪಷ್ಟ ಅರಿವಿದ್ದಂತೆ, ಎಲ್ಲ ವಿಷಯಗಳಲ್ಲೂ ಆದರ್ಶಗಳಿವೆ. ಸಮಾಜದಲ್ಲಿನಂತೆ ರಾಜಕೀಯದಲ್ಲಿಯೂ ಇವನು ತೀವ್ರಗಾಮಿ. ಪ್ರಪಂಚದವರೆಲ್ಲ ತನ್ನ ಆತ್ಮೀಯರು ಎನುವ ವಿಶಾಲ, ಉದಾತ್ತ ಭಾವ ನೆಗಳಿದ್ದರೂ, ಗೋಪಾಲನ ಭಾವನೆಗಳಂತೆ ಇವನವು ಭಾವಾತಿರೇಕದ ಮಂಜಿನಲ್ಲಿ ಸೆರೆಯಾಗಿರುವುದಿಲ್ಲ. ಸ್ತಬ್ಧವಾದ ವಿವೇಚನಾಶಕ್ತಿ ಇವ ನಲ್ಲಿಯ ಪ್ರಮುಖ ಗುಣ. ಸ್ತ್ರೀಯರ ಬಗೆಗೆ ಗೋಪಾಲನಿಗಿರುವಂತೆ ಗುರುತರವಾದ ಭಾವನೆಗಳಾಗಲಿ, ಅದ್ಭುತವಾದ ಭ್ರಾಂತಿಗಳಾಗಲಿ ಇಲ್ಲದಿದ್ದರೂ, ವಿನೋದಯುತ ಆದರವಿದೆ. ಆತ್ಮವಿಶ್ವಾಸ ಇರುವುದ ರಿಂದ, ಸಮರ್ಪಕಳಾದ ಜೊತೆಗಾತಿ ತನಗೆ ಸಿಕ್ಕಲಾರಳು ಎಂಬ ಸಂದೇಹ ಇದ್ದೇ ಇರುವುದರಿಂದ ಅವಳಿಗಾಗಿ ಜಾಗೃತವಾಗಿ ಅನ್ವೇಷಿ ಸುವುದಿಲ್ಲ. ಅಭಿಮಾನ ಆತ್ಮ ದುರಭಿಮಾನಕ್ಕೆ ತಿರುಗದಂತೆ ನೋಡಿ ಕೊಳ್ಳುವ ಪ್ರಜ್ಞೆ, ಸಂಯಮ ಇವನಲ್ಲಿವೆ. ಇವನ ವ್ಯಕ್ತಿ ವೈಶಿಷ್ಟ್ಯವೇ ಇವನ ಏಕಾಕಿತನಕ್ಕೆ ಕಾರಣ. ಕೇಶವನಿಗೆ ಎಂದೂ ಅರ್ಥವಾಗದಂ ತಹ, ಅನುಭವವಾಗದಂತಹ, ಗೋಪಾಲನಿಗೆ ಇನ್ನೂ ಅನುಭವ ವಾಗದ, ಮುಂದೆ ಅರ್ಥವಾಗಬಹುದಾದ, ಏಕಾಕಿತನ ಇವನದು. ಏಕಾಕಿತನದ ಉತ್ಕಟಾನಂದ, ತೀಕ್ಷ್ಣ ಕ್ಲೇಷ ಎರಡನ್ನೂ ಅನುಭವಿಸಿ ಅವುಗಳಲ್ಲಿ, ಮತ್ತು ಅವುಗಳ, ಪ್ರಪಂಚದ ಮಲನದಿಂದ ಸೃಷ್ಟಿತವಾದ ಭಾವನೆ, ಯೋಚನೆಗಳಿಗೆ ಚಿತ್ರರೂಪ ಕೊಡುವದರಲ್ಲಿ ಅವನು ತನ್ನ ಜೀವನದ ಸಾರ್ಥಕ್ಯವನ್ನು ಕಾಣುತ್ತಾನೆ. ಶುದ್ಧ ಕಲಾವಿದ ಇವನು.

ಗೋಪಾಲ! ಇವನನ್ನು ನೋಡಿದ ಕೂಡಲೇ ಯಾರಾದರೂ ತರುಣ ಕವಿ ಎಂದು ಅರಿಯಬಹುದು. ಅವುಗಳ ಬಗೆಗೆ ವಿಶೇಷ ಗಮನವನ್ನು ಕೊಡದಿದ್ದರೂ ಸೊಗಸಾಗಿ ಕಾಣುತ್ತಿದ್ದ ಉಡಿಗೆ ತೊಡಿ ಗೆಗಳು, ಕನಸು ತುಂಬಿಕೊಂಡ ಕಣ್ಣುಗಳು, ಮುಗ್ಧ ಮುಖಭಾವ,

ತನ್ನಲ್ಲಿರುವ ವಿಶಿಷ್ಟತೆಯು, ಅಸಾಮಾನ್ಯ ಶಕ್ತಿಯ ಅರಿವು ಇವನಿಗೆ ಈಗೀಗ ಆಗತೊಡಗಿದೆ. ಪ್ರಪಂಚದ ಕುರೂಪ ದೃಶ್ಯಗಳ ಪರಿಚಯು ವಿನ್ನೂ ಆಗಿಲ್ಲದಿರುವುದರಿಂದ ಮುಖದ ನಗು ಇನ್ನೂ ಗೆರೆ ಮಾಗಿ ಗೂಡು ಕಟ್ಟಿಲ್ಲ. ನಿಷ್ಕಪಟ ಮನಸ್ಸು; ಮಗುವಿನಂತೆ, ಸರಳವಾದ ಹೃದಯ ಇವನದು. ತಾರುಣ್ಯದ ಮೊದಲ ಹೆಜ್ಜೆಯನ್ನಿನ್ನೂ ದಾಟಿಲ್ಲ. ಪ್ರೌಢತೆಗೆ ಸಹಜವಾದ ಗಾಢಾಲೋಚನೆ, ದೃಷ್ಟಿವೈಶಾಲ್ಯ ಇನ್ನೂ ಅವನಿಗೆ ಸಾಧಿಸಿಲ್ಲ. ಅವನ ಪ್ರೇಮ ನಿರ್ದಿಷ್ಟ ಸ್ತ್ರೀಯ ಮೇಲಲ್ಲ. ಅವನಿಗೆ ಒಟ್ಟು ಸ್ತ್ರೀ ಜಾತಿಯ ಬಗೆಗೇ ಒಲವು, ಗೌರವ, ಆರಾಧನೆ. ನ್ಯೂನತೆಯಿಲ್ಲದ ಸ್ತ್ರೀತ್ವದ ಬಗ್ಗೆ ಏನೇನೋ ಕನಸುಗಳು, ಕಲ್ಪನೆಗಳು. ಕೆಲವೊಮ್ಮೆ ಯಾರೋ ಒಬ್ಬಳ ಮೇಲೆ ಕಲ್ಪನಾಪುಷ್ಪಗಳಿಂದ ಹೆಣೆದ ಕಿರೀಟವನ್ನು ಇಡುವುದು ಅಥವಾ ಇಡಲು ಪ್ರಯತ್ನಿಸುವುದು ಉಂಟು. ಪ್ರೇಮವನ್ನು ಸತ್ಯವಾಗಿ, ಆಳವಾಗಿ, ಪ್ರತ್ಯಕ್ಷವಾಗಿ ಅನುಭವಿಸದೆಯೇ, ಅದರ ವಿಷಯವಾಗಿ ಉದ್ಬುದ್ಧದ ಕವನಗಳನ್ನು ಕಟ್ಟುವ ಹಿಮುತಾಗದ ಮೊಗ್ಗು ಅವನು. ಅವನ ಕಣ್ಣನ್ನು ಮಿಾಟಿದ ಕಣ್ಣು ಮೃದುವಾಗಿದ್ದರೆ ಆಯಿತು. ಹೂವಿನಲ್ಲಿ ದುಂಬಿ ಸೆರೆಯಾದಂತೆ, ಮೋಡದಲ್ಲಿ ಚಂದ್ರ ಸೆರೆಯಾದಂತೆ, ಆ ಮಾರ್ದವದಲ್ಲಿ ಅವನು ಸೆರೆ. ಅಯ್ಯೋ ಪಾಪ! ಅವನಿಗೆ ವ್ಯವಹಾರಜ್ಞಾನ ಶೂನ್ಯ. ಈ ಭಾವಪರವಶತೆ ಮುಂದುವರೆಯಬಹುದು, ಅಥವಾ ಜೀವನದ ಎಡರು ತೊಡರುಗಳಿಗೆ ಸಿಕ್ಕಿ ಮುಗ್ಗರಿಸಿ, ಮಣ್ಣಾಗಿ ಜನಸಾಮಾನ್ಯರಲ್ಲಿ ಅವನೂ ಒಬ್ಬನಾಗಬಹುದು, ಅಥವಾ ಆಘಾತದಿಂದ ಚೇತರಿಸಿಕೊಳ್ಳಲಾರದೆ, ಮನೋ ದೌರ್ಬಲ್ಯದಿಂದ ನಿರಾಶಾವಾದದ ಸೆಳೆತಕ್ಕೆ ಸಿಕ್ಕಿ, ಶೂನ್ಯದಲ್ಲಿ ಕಣ್ಮರೆಯಾಗಬಹುದು. ಹೂ ತುಂಬಿದ ಮರವನ್ನು ಬಳಸಿದ ಹಾವನ್ನು ಬಳ್ಳಿಯೆಂದೇ ಎಣಿಸಿದ್ದ ಬಾಲಕ ಅವನು.

ನನ್ನಲ್ಲಿ ಈ ಮೂರು ವ್ಯಕ್ತಿಗಳ-ಗುಂಪುಗಳ-ಗುಣಗಳೂ ಇರುವುದರಿಂದ ನಾನು ಅವರು ಮೂವರನ್ನೂ ಅರ್ಥ ಮಾಡಿಕೊಳ್ಳಬಲ್ಲೆ.

ಆದರೆ ಅವರು ಮೂವರು ನನ್ನ ಒಂದೊಂದು ಭಾಗಗಳನ್ನು ಮಾತ್ರ ಅರ್ಥ ಮಾಡಿಕೊಳ್ಳಬಲ್ಲರು. ಅವರ ಕನ್ನಡಿಗಳಲ್ಲಿ ಪೂರ್ಣ ಪ್ರತಿಬಿಂಬ ಮೂಡಲಾರದು. ಗಾಜಿಗೆ ಅವರು ಬಳಿದ ವ್ಯಕ್ತಿತ್ವದ ಪಾದರಸ ತನ್ನ ಗುಣಗಳಿರುವ ಭಾಗಗಳನ್ನು ಮಾತ್ರ ಪ್ರತಿಬಿಂಬಿಸಬಲ್ಲದು. ಮೂರು ಕನ್ನಡಿಗಳಲ್ಲೂ ಚಿತ್ರ ಸುಂದರವಾಗಿರಬಹುದು, ಇಲ್ಲದಿರಬಹುದು; ಆದರೆ ಮೂರು ಚಿತ್ರಗಳೂ ಅಪೂರ್ಣ....

ಕಾರು ನಿಂತಿತು. ಮನೆಯ ದೀಪದ ಬೆಳಕು ಕಾರಿನೊಡನೆ ಹರಿದು ಬಂತು. ಒಮ್ಮೆ ಆಕಳಿಸಿ ಕೆಳಗಿಳಿದು ಹೋದಳು.

# ಇಲ್ಲ ಇಲ ....

' ಗುಡ್‌ನೈಟ್, ಗುಡ್‌ನೈಟ್, '

' ನಾಳೆ ಮೀಟಿಂಗ್ ಮರೆಯಬೇಡಿ. '

ಕಡೆಯ ಕಾರು ಹೊರಟಿತು. ಗೇಟು ಮುಚ್ಚಿದ ಸದ್ದಾಯಿತು. ಬೂಟುಕಾಲಿನ ಸಪ್ಪಳ ದೂರ ದೂರ ಸಾಗಿತು.

ಒಳಗೆ ಬಂದು ಬಾಗಿಲನ್ನು ಮುಂದೆ ಮಾಡಿದಳು. ತೋಟ ವನ್ನು ತುಂಬಿದ್ದ ಅತಿಥಿಗಳ ಮಾತಿನ ಪ್ರತಿಧ್ವನಿ ಮುಚ್ಚಿದ ಬಾಗಿ ಲಿನ ಹಿಂದೆ ಅಡಗಿತು. ಗಡಿಯಾರದ ಕಡೆ ಕಣ್ಣೋಡಿಸಿದಳು. ೮-೨೦. ಗೆಳೆಯರನ್ನು ಅಷ್ಟು ದೂರ ಬಿಟ್ಟುಬರಲು ಹೋಗಿದ್ದ ಗಂಡ ಸುಮಾರು ಅರ್ಧ ಗಂಟೆಯಲ್ಲಿ ತಿರುಗಿ ಬರಬಹುದು.

ಮಧ್ಯದ ದೊಡ್ಡ ದೀಪ, ಬಲಗಡೆಯ ಸಣ್ಣ ದೀಪ ಎರಡನ್ನೂ ಆರಿಸಿದಳು. ಎಡಗಡೆಯ ಸಣ್ಣ ದೀಪ ಬೆಳಕಿನಿಂದ ಹೆಚ್ಚಾಗಿ ಕತ್ತಲೆ ಯನ್ನು ಹರಡಿತ್ತು. ಚಪ್ಪಲಿಯನ್ನು ಕಳಚಿಟ್ಟು ಗೋಡೆಯ ಮಗ್ಗು ಲಿನ ಸೋಫದ ಮೇಲೆ ಒರಗಿದಳು. ಬೆಳಕು, ಮಾತು, ನಗುಗಳ ಬದಲು ಕತ್ತಲೆ, ಮೌನ, ಖಾಲಿಯ ಕೋಣೆ. ಇನ್ನು ತುಟಿಗೆ ಅಂಟಿ ಸಿದ್ದ ನಗೆಯನ್ನು ತೆಗೆದಿಡಬಹುದು.

ಕೋಣೆಯ ತುಂಬ ಕವಿದಿದ್ದ ಹೊಗೆಯನ್ನು ಗಾಳಿ ಹೊರಗೆ ಸಾಗಿಸುತ್ತಿತ್ತು. ಕಿಟಕಿಗೆ ತೆರೆ ಹಾಕಿದ ಜಾಜಿಯ ಬಳ್ಳಿ ತೆರವಾದ ಸ್ಥಳವನ್ನು ಸುವಾಸನೆಯಿಂದ ತುಂಬುತ್ತಿತ್ತು. ಕೋಣೆ ನಿಧಾನವಾಗಿ ತಂಪಾಗುತ್ತಿತ್ತು.

ಗಾಜಿನ ಪಾತ್ರೆಯಲ್ಲಿಟ್ಟಿದ್ದ ಹೂಗಳಿಂದ ಆಗಾಗ ಒಂದೊಂದು

ರೇಖು ಕೆಳಗೆ ಬೀಳುತ್ತಿತ್ತು. ಹೊಗಳ ಕಣ್ಣೀರು ಕೂಡ ಚೆನ್ನ. ಮೇಜಿನ ಬಿಳಿ ಬಟ್ಟೆಯ ಮೇಲೆ ಒಂದು ಕಡೆ ಅಗಲವಾದ ಕಾಫಿ ಕರೆ ಮೂಡಿತ್ತು. ವಿಚಿತ್ರ ಆಕಾರದ ಕರೆ. ಮಗುವಿನ ಅಳುಮುಖ. ತಟ್ಟೆಯಲ್ಲಿ ತಿಂಡಿಗಳ ಅವಶೇಷ. ಬಟ್ಟಲುಗಳ ತಳದಲ್ಲಿ ಒಣಗುತ್ತಿದ್ದ ಕಾಫಿ ಗಸಿ ಒಂದು ನೀರಿನ ಲೋಟದಲ್ಲಿ ಸಣ್ಣ ಪತಂಗವೊಂದು ರೆಕ್ಕೆ ಬಡೆಯುತ್ತಿತ್ತು: ಹಾರಲು ಯತ್ನಿಸುತ್ತಿದ್ದ ಕಪ್ಪೆಚಿಪ್ಪು. ಆ್ಯಷ್ ಟ್ರೇಗಳ ತುಂಬ ಸಿಗರೇಟು ತುಣಕು, ಬೆಂಕಿಕಡ್ಡಿ, ಬೂದಿ. ಬೂದು ಹಿನ್ನೆಲೆಯ ಮೇಲೆ ಬಿಳುಪು, ಕಪ್ಪು. ಉರಿ, ಹೊಗೆ ಎರಡನ್ನೂ ಕಳೆದುಕೊಂಡ ಸಿಗರೇಟ್ ತುಂಡುಗಳು : ಸೋತು ಮಲಗಿದ ಮುದುಕರು; ' ಇಲ್ಲ, ಇಲ್ಲ, ಏನೊಂದನು ಮಾಡಲಿಲ್ಲ ಇವನು; ' ತಿರಸ್ಕಾರದ ದೃಷ್ಟಿಗಳಿಂದ ಅವರನ್ನು ಮರೆಮಾಡಲು ತ್ವರೆಯಿಂದ ಎಳೆದ ಬೂದು ಬಣ್ಣದ ತೆರೆ.

ವೃತ್ತ ಪತ್ರಿಕೆ ಮಾಮೂಲಿನ ಜಾಗದಲ್ಲಿರಲಿಲ್ಲ. ಅತಿಥಿಗಳ ಕಣ್ಣಿಗೆ ಬಿದ್ದು ಮತ್ತೆ ಚರ್ಚೆ ಪ್ರಾರಂಭವಾದೀತೆಂದು ಹೆದರಿ ಒಳಗೆ ತೆಗೆದಿಟ್ಟಿದ್ದಳು. ಬೆಳಗಿನ ಆಘಾತವೇ ಸಾಕಾಗಿತ್ತು.

* * *

ಅಂದು ಬೆಳಗ್ಗೆ ದಿನದ ಪದ್ಧತಿಯಂತೆ ಊಟ ಮಾಡಿದ ಮೇಲೆ ಗಂಡ ಪತ್ರಿಕೆಯನ್ನು ಓದುತ್ತಿದ್ದ. ಇದ್ದಕ್ಕಿದ್ದಂತೆ ಕೂಗಿದ : 'ಕೇಳಿಲ್ಲಿ, ಪದ್ಮಿನಿ. " ಕಾರ್ಮಿಕರ ಮುಖಂಡನ ದಸ್ತಗಿರಿ.... .... " ಯಾರೂಂತೀಯ ? ಹಿಂದೆ ನನ್ನ ಕ್ಲಾಸ್‌ಮೇಟ್ ಆಗಿದ್ದ ಪ್ರಭಾಕರ. ಹತ್ತಿ ಗಿರಣಿ ಕೆಲಸಗಾರರ ಮುಷ್ಕರಕ್ಕೆ ಇವನೇ ಅಂತೆ ಕಾರಣ ! '

' ಪ್ರಭಾಕರ ! '

ಎದೆ ಬಡಿದ ಧ್ವನಿಯಲ್ಲೂ ಪ್ರತಿಬಿಂಬವಾಗಿತ್ತು.

' ಹೊ ಪ್ರಭಾಕರ. ಕೆಲಸಗಾರರಿಗೆ ಭಾಷಣ ಕೊಡ್ತಿದ್ದಾಗ ದಸ್ತಗಿರಿ ಮಾಡಿದರಂತೆ. ಕೆಲಸಗಾರರು ಪ್ರತಿಭಟಿಸೋದಕ್ಕೆ ಬಂದ

ರಂತೆ.... ದೊಡ್ಡ ಜಗಳವೇ ಆಗಿರಬೇಕು!.... ನೀನೂ ನೋಡಿರಬೇಕಲ್ಲ ಇವನನ್ನ? ನಾನು, ನಿಮ್ಮಣ್ಣ, ಅವನು ಎಲ್ಲಾ ಒಟ್ಟಿಗೆ ಓದಿರೋರು. ಮೂರು ಜನವೂ ಯಾವಾಗಲೂ ಒಟ್ಟಿಗೇ ಇರ್ತಿದ್ದೆವು.'

'ಹೌದು. ನೋಡಿದ್ದೆ.'

ಧ್ವನಿ ದಿನಕ್ಕಿಂತ ಭಾರವಾಗಿತ್ತು.

'ಬುದ್ಧಿವಂತ. ಆದರೆ ಮೊದಲಿನಿಂದಲೂ ಹೀಗೇ ಗಲಾಟೆ. ಕ್ಲಾಸ್ ಪುಸ್ತಕಗಳನ್ನು ಓದದೇನೇ ಪರೀಕ್ಷೆ ಪ್ಯಾಸ್ ಮಾಡ್ತಿದ್ದ! ಮೂರು ಹೊತ್ತೂ ಏನೇನೋ ಓದು, ಕನಸು ಮಾತು. ಯಾವ ಸ್ಟ್ರೈಕ್‌ನಲ್ಲಿ ನೋಡು ಅವನೇ. '೪೨ ರಲ್ಲಂತೂ ತಿಂಗಳಗಟ್ಟಳೆ ಜೈಲಿನಲ್ಲಿದ್ದ. ನಾನು ಹುಷಾರಾಗಿ ಇದು ಯಾವುದಕ್ಕೂ ಸೇರಿರಲಿಲ್ಲ. ನಿಮ್ಮಣ್ಣ ಸ್ವಲ್ಪ ದುಡುಕು. ಕಾಲೇಜು ಬಿಟ್ಟು ಜೈಲಿಗೆ ಹೋದ. ಆದರೆ ನಿಮ್ಮ ತಂದೆ ಹೇಳಿದ ಹಾಗೆ ಕೇಳಿ ಕ್ಷಮಾಪಣೆ ಪತ್ರ ಕೊಟ್ಟು ಹೊರಗೆ ಬಂದ. ಅಲ್ಲಿಂದ ಮುಂದೆ ನಮಗೂ ಪ್ರಭಾಕರನಿಗೂ ಸಂಪರ್ಕ ಕಡಿಮೆಯಾಗಿ ಹೋಯಿತು."

ಸಿಗರೇಟನ್ನು ಹೊತ್ತಿಸುತ್ತ ಮಾತನ್ನು ಮುಂದುವರೆಸಿದ. 'ಆ ಮೇಲೆ ಅವನು ಮತ್ತೆ ಕಾಲೇಜನ್ನು ಸೇರಲೇ ಇಲ್ಲವಂತೆ. ಆಗಾಗ ಅವನ ಹೆಸರನ್ನು ಕೇಳ್ತಿದ್ದೆವು. ಸತ್ಯಾಗ್ರಹ, ಪ್ರಭಾತ್‌ಫೇರಿ, ಭಾಷಣ ಎಲ್ಲದರಲ್ಲೂ ಅವನದ್ದು ಎತ್ತಿದ ಕೈ. ಸ್ವಾತಂತ್ರ್ಯ ಬಂದ ಮೇಲೆ ಇವನಿಗೆ ಮಂತ್ರಿ ಪದವಿ ಖಂಡಿತ ಅಂದುಕೊಳ್ಳುತ್ತಿದ್ದೆವು ನಾವು! ಹಾಗೇ ಇವನನ್ನು ನಿಜವಾಗಲೂ ಯಾವುದೋ ಒಂದು ಒಳ್ಳೇ ಕೆಲಸದಲ್ಲೇ ಹಾಕಿದ್ದರು. ಸ್ವಲ್ಪ ಕಾಲ ಹಾಗೂ ಹೀಗೂ ಇದ್ದ. ಆ ಮೇಲೆ ರಾಜೀನಾಮೆ ಕೊಟ್ಟು ಹೊರಬಿದ್ದ. ಆಗಿನಿಂದ ಹೀಗೇ ಅಲೀತಾ ಇದ್ದಾನೆ. ಈಗ ಇವನ ಹಿಂಬಾಲಕರು ಕಾರ್ಖಾನೆ ಕೆಲಸಗಾರರು! ಎಷ್ಟು ಸಂಬಳ ಕೊಡ್ತಾರೋ ಕಾಣೆ ಕಮ್ಯೂನಿಸ್ಟರು ಇವನಿಗೆ!'

ಭಾವದ ಒತ್ತಡ ಅತಿಶಯವಾಗಿದ್ದುದರಿಂದ ಅವಳಿಂದ ಮಾತು ಹೊರಬರಲಿಲ್ಲ.

ಶೂ ಹಾಕಿಕೊಳ್ಳುತ್ತ ತೀರ್ಪು ಕೊಟ್ಟ: 'ಇವನೂ ಎಲ್ಲರ ಹಾಗೆ ಇರಬಾರದಾಗಿತ್ತೆ? ಏನು ಬಂದ ಹಾಗಾಯ್ತು ಈಗ ಇವನಿಗೆ? ಕೆಲಸವಿಲ್ಲ, ಹಣವಿಲ್ಲ, ಮನೆ ಇಲ್ಲ, ಮದುವೆ ಇಲ್ಲ. ಯಾರಿಗೆ ಸುಖ ಇದರಿಂದ? ಅವನಿಗೇ? ಅವನ ಮನೆಯೋರಿಗೇ?.... ಸಧ್ಯ ಸಮಯಕ್ಕೆ ಸರಿಯಾಗಿ ನಿಮ್ಮಣ್ಣನಿಗೆ ಬುದ್ಧಿ ಬಂತಲ್ಲ!.... ೫-೩೦ ರ ಹೊತ್ತಿಗೆ ಕಾಫಿ ಸಿದ್ಧ ಮಾಡಿರು, ಸುಮಾರು ೮-೧೦ ಜನ ಆಗಬಹುದು.... ಬಾಗಿಲು ಹಾಕಿಕೋ. ಹೋಗ್ತೀನಿ.'

ಅಡಿಗೆ ಮನೆಗೆ ಹೋಗಲು ತಿರುಗಿದಳು, ಹಿಂದಿನಿಂದ ಅವನ ತ್ವರಿತ ಕರೆ ಕೇಳಬಂತು. 'ಪದ್ಮಿನಿ, ಕರ್ಚಿಫ್ ಮರೆತೆ. ತಂದು ಕೊಡು.'

'ಪದ್ಮಿನಿ'. ಮದುವೆಯಲ್ಲಿ ಅವಳ ಹೆಸರನ್ನು ಮಾರ್ಪಡಿಸಿದ್ದ. ಪದ್ಮ ಎನ್ನುವುದು ಹಳೆಯ ಫ್ಯಾಷನ್! ಒಳ್ಳೆಯದೇ ಆಯಿತು. ಇವನಿಂದ 'ಪದ್ಮ' ಎಂದು ಕೂಗಿಕೊಳ್ಳುವುದು ತಪ್ಪಿತು. 'ಪದ್ಮ' ಅವನು ಹಾಗೆ ಕೂಗುತ್ತಿದ್ದ! ಒಳಗೆ ಹೋಗಿ ಪತ್ರಿಕೆಯನ್ನು ಬಿಡಿಸಿದಳು. ಹೆಚ್ಚಿನ ವಿವರಗಳೇನೂ ಇರಲಿಲ್ಲ

ಇದು ಎಷ್ಟನೆಯ ಬಾರಿಯ ದಸ್ತಗಿರಿಯೋ ಜ್ಞಾಪಕವಿರಲಿಲ್ಲ. ಅವನಿಗೂ ಇರಲಾರದು. ಆದರೆ ಅವನು ಮೊದಲನೆಯ ಬಾರಿ ಜೈಲಿಗೆ ಹೋದದ್ದನ್ನು ಇಬ್ಬರೂ ಮರೆಯುವಂತಿರಲಿಲ್ಲ.

ರಸ್ತೆಗಳಲ್ಲಿನ ಗಲಭೆಯ ಕಾರಣ ಕಾಲೇಜಿಗೆ ಹೋಗದೆ ಮನೆಯಲ್ಲೇ ಉಳಿದಿದ್ದಳು. ಮನೆಯ ಮುಂದೆ ಒಂದು ಮೆರವಣಿಗೆ ಬಂತು. ಜಯಜಯಕಾರ ಕೇಳಿ ಕಿಟಕಿಯಿಂದ ಹೊರಗೆ ನೋಡಿದಳು. ಕಾಂಗ್ರೆಸ್ ಬಾವುಟವನ್ನು ಹಿಡಿದು, ಹುಡುಗರ ಗುಂಪಿನ

ಮುಂಪಾಳಾಗಿ ಅವನು ನಡೆಯುತ್ತಿದ್ದ. ಸುಂದರನಲ್ಲದಿದ್ದರೂ ಆವೇಶದ ಕಾವು ಯೌವನಕ್ಕೆ ಕಳೆ ಕೊಟ್ಟಿತ್ತು. ತೇಜಸ್ಸು ಮುಖದಿಂದ, ನ್ಮೈಯಿಂದ ಹೊರಹೊಮ್ಮುತ್ತಿತ್ತು. ಪೋಲೀಸರು ಬಂದು ತಡೆದಾಗ ದಿಟ್ಟತನದಿಂದ ಅವರ ಜೊತೆಗೆ ಹೋದ. ಹೋಗುವ ಮುನ್ನ ಕಿಟಕಿಯ ಕಡೆಗೆ ತಿರುಗಿ ನೋಡದಿರಲಿಲ್ಲ.

ಅದಕ್ಕೆ ಮೂರು ನಾಲ್ಕು ತಿಂಗಳಿನ ಹಿಂದೆಯೇ ಅವರಿಬ್ಬರಿಗೆ ಪರಿಚಯವಾಗಿತ್ತು. ಅವಳ ಅಣ್ಣನಿಗೆ ಬುದ್ಧಿವಂತ ಹುಡುಗರನ್ನು ಕಂಡರೆ ಗೌರವ. ಅವನನ್ನು ಆಗಾಗ ಮನೆಗೆ ಕರೆತರುತ್ತಿದ್ದ. ತನ್ನ ಪ್ರತಿಭೆ, ಸೌಜನ್ಯಗಳಿಂದ ಅವನು ಮನೆಯವರೆಲ್ಲರ ವಿಶ್ವಾಸಕ್ಕೆ ಪಾತ್ರನಾಗಿದ್ದ.

ಆದರೆ ಚಳವಳಿಯ ನಂತರ ಅವರ ವಿಶ್ವಾಸವನ್ನು ಕಳೆದುಕೊಂಡಿದ್ದ — ಅವಳೊಬ್ಬಳನ್ನು ಬಿಟ್ಟು. ಕಳೆಯುವ ಮಟ್ಟವನ್ನು ಮೀರಿತ್ತು ಅವಳ ವಿಶ್ವಾಸ. ಮಗನ ಮೇಲೆ ಪ್ರಭಾವ ಬೀರಿ ಅವನನ್ನು ರಾಜಕೀಯಕ್ಕೆಳೆದನೆಂದು ಅವಳ ತಾಯಿ ತಂದೆಯವರಿಗೆ ಅಸಮಾಧಾನವಾಗಿತ್ತು. ತಂದೆಯ ಪ್ರಭಾವಕ್ಕೆ ಒಳಗಾದ ಅವಳ ಅಣ್ಣ ಸ್ನೇಹಿತನಿಂದ ದೂರ ಸರಿಯುತ್ತ ಬಂದ. ಅಣ್ಣ ದೂರ ಸರಿದಂತೆ ಹತ್ತಿರ ಸರಿಯತೊಡಗಿದಳು ಇವಳು. ಅವನ ಪುರೋಗಾಮಿ ದೃಷ್ಟಿ, ಸುಧಾರಕ ಮನೋಭಾವ ತಾಯಿತಂದೆಯವರಿಗೆ ಸಂಶಯಾಸ್ಪದವಾಗಿತ್ತು, ಅಶಾಂತಿಗೆ ಕಾರಣವಾಗಿತ್ತು.

ಅವನ ಬಂಡಾಯ ಕೇವಲ ಯೌವನದ ಕುದಿಭಾವನೆಯ ಪರಿಣಾಮವಾಗಿರಲಿಲ್ಲ. ಆದರ್ಶ ಜೀವನದ ಗೋಪುರವನ್ನು ವಾಸ್ತವದ ವಿಷತಳಹದಿಯ ಮೇಲೆ ಜೋಡಿಸಲು ಯತ್ನಿಸುತ್ತಿದ್ದ. ಬಾರಿಬಾರಿಗೂ ಗೋಪುರ ಉರುಳಿ ಬೀಳುತ್ತಿತ್ತು. ಬೀಳುವಾಗ ಅವನನ್ನೂ ಎಳೆದುಕೊಂಡೇ ಬೀಳುತ್ತಿತ್ತು. ರಾಜಕೀಯದಲ್ಲಿ, ಸಮಾಜದಲ್ಲಿ ಎಲ್ಲ ಕಡೆಯಲ್ಲೂ ಅವನಿಗೆ ಪೆಟ್ಟುಗಳು ಬೀಳತೊಡಗಿದವು. ಜನಕ್ಕೆ ಅಷ್ಟು

ಕಠೋರ ಸೂರ್ಯ ಬೇಕಿರಲಿಲ್ಲ. ಆದರೆ ಸೂರ್ಯನಿಗೆ ಬೆಳಗುವು ದನ್ನು ಬಿಡಲಾಗಲಿಲ್ಲ.

ಇದರ ಸತ್ಯಾಂಶ ಅವಳಿಗೆ ಮನದಟ್ಟಾಗಿತ್ತು. ಆದರೆ ಜನರಿಗೆ ತಿಳಿಯಪಡಿಸುವ ವ್ಯವಧಾನ ಅವಳಿಗಿರಲಿಲ್ಲ.

ತಾಯಿತಂದೆಗೆ ದೇಶಕ್ಕೆ ಸ್ವಾತಂತ್ರ್ಯ ಬಂದದ್ದಕ್ಕಿಂತ ಹೆಚ್ಚಿನ ಸಂತೋಷದ ಸಂಗತಿಯೆಂದರೆ ಆದರ ಹಿಂದೆಯೇ ಅವನಿಗೆ ದೊರೆತ ಕೆಲಸ. ಮತ್ತೆ ಅವನನ್ನು ವಿಶ್ವಾಸದಿಂದ ಕಾಣಲಾರಂಭಿಸಿದರು. ಈ ಹೊಸ ವಸಂತದಲ್ಲಿ ಮುಚ್ಚುಮರೆಗಳು ಮಾಯವಾದುವು. ಒಬ್ಬ ರಿಂದೊಬ್ಬರು ಪ್ರಯಾಸದಿಂದ ಬಚ್ಚಿಟ್ಟಿದ್ದ ಭಾವನೆಗಳನ್ನು ಇಬ್ಬರೂ ಹೊರಗೆಡಹುವ ಧೈರ್ಯ ಮಾಡಿದರು. ಪೂರ್ಣ ವಸಂತ ನೆಲೆಸಿತು.

ಆದರೆ ಸ್ವಲ್ಪಕಾಲ ಮಾತ್ರ. ಮೇಲಧಿಕಾರಿಗಳ ಮೇಲ್ಹೊದಿಕೆ ಯನ್ನು ಬದಿಗೊತ್ತಿ ಒಳಗಿನ ಕಸದ ಗುಡ್ಡೆಗಳನ್ನು ಕಂಡಾಗ ಅವನಿಗೆ ರೇಗಿಗಿಂತ ಹೆಚ್ಚಾಗಿ ಹತಾಶೆಯಾಯಿತು. ಪ್ರಗತಿಗೆ ವಿರುದ್ಧವಾಗಿ ನಿಂತ ಆಲಸಿ ಕಸದ ಗುಡ್ಡೆಗಳು ಕಿಡಿಯನ್ನು ಸಹಿಸಲಾರದೆ ಹೋದವು. ಕಚೇರಿಯಲ್ಲಿನ ನಿತ್ಯ ಜಗಳವನ್ನು ಸಹಿಸಲಾರದೆ ಅವನು ಕೆಲಸಕ್ಕೆ ರಾಜೀನಾಮೆ ಕೊಟ್ಟ.

ಕೆಲಸಕ್ಕಿತ್ತ ರಾಜೀನಾಮೆ ವಸಂತದ ಕೊನೆಯ ಹೆಜ್ಜೆ ಎನ್ನುವು ದರ ಅರಿವು ಅವನಿಗಿತ್ತು. ಒಂದು ಸಂಜೆ ಅವಳಿಗೆ ತಿಳಿಸಿದ : 'ದೇಶಕ್ಕೆ ಹೊಸ ಧ್ವಜ ಬಂದಿದೆ, ನಿಜ. ಮನೆಗೆ ಹೊಸ ಬೋರ್ಡು ಬಂದಿದೆ; ಆದರೆ ಮನೆಯ ಸ್ಥಿತಿಗತಿಗಳಲ್ಲಿ ಸ್ವಲ್ಪವೂ ಬದಲಾವಣೆಯಾಗಿಲ್ಲ. ಗಾಂಧಿಟೋಪಿ ಚಿನ್ನದ ಅಲಂಕಾರದಿಂದ ಭಾರವಾಗಿದ್ದು, ನಿಶ್ಚೇತನವಾ ಗಿದೆ. ಖಾದಿನೂಲಿನೆಳೆಯಿಂದ ಕ್ರೂರ ಬಂಡವಾಳುಶಾಹಿಗಳ ಕುತ್ತಿಗೆ ಯನ್ನು ಕೊಯ್ಯಲಾಗದು. ಹರಿತವಾದ ಉಕ್ಕಿನ ತಂತಿ ಬೇಕೇ ಬೇಕು. ಚೂಪಾದ ಹಲ್ಲುಗಳಿರುವ ಉಕ್ಕಿನ ತಂತಿ. ಅದನ್ನು ಅವರ ಕುತ್ತಿಗೆಗಳ ಮೇಲಿಟ್ಟು ಈ ಕಡೆ ಒಬ್ಬರು ಆ ಕಡೆ ಒಬ್ಬರು ಹಿಡಿದು

ನಿಂತು ನಿಧಾನವಾಗಿ ಕೊಯ್ಯಬೇಕು. ನಿ-ಧಾ-ನವಾಗಿ. ತೊಟ್ಟು ತೊಟ್ಟು ರಕ್ತ ನೆಲಕ್ಕೆ ಬೀಳಬೇಕು. ಬಿದ್ದ ಹೊಲಸನ್ನು ತೊಳೆಯ ಬೇಕು. ಕೊಯ್ಸಿಕೊಳ್ಳುವವರ ಚೀತ್ಕಾರಕ್ಕೆ ನಡುಗಿ ಅವರು ಕಟ್ಟಿದ ಇಮಾರತಿಗಳೆಲ್ಲ ಒಂದೊಂದಾಗಿ ನೆಲಕ್ಕುರುಳಬೇಕು. ಆ ಮೇಲೆ ಸ್ವಚ್ಛವಾದ ನೆಲದ ಮೇಲೆ ಹೊಸ ಜನಾಂಗವೆಲ್ಲ ಸೇರಿ ಹೊಸ ದಾದ, ಸ್ವಚ್ಛವಾದ ಕಟ್ಟಡಗಳನ್ನು ಕಟ್ಟಬೇಕು.... '

ಶಂಕೆಯಿಂದಲೇ ಕೇಳಿದಳು, ' ತಂತಿಯ ಇನ್ನೊಂದು ತುದಿ ಯನ್ನು ಹಿಡಿಯುವರಾರು ?

ಎದೆ ಮೊರೆಯಿಟ್ಟಿತು, " ನೀನು ' ಎನ್ನು, " " ನೀನು ಎನ್ನು "

ಮಾತು ನಿಲ್ಲಿಸಿ ಅವಳ ಕಡೆಗೆ ನೋಡಿದ. ಕಣ್ಣುಗಳು ದೇಹ ದುದ್ದ ನಿಧಾನವಾಗಿ ಸಾದದವು. ಬಿಡದೆ, ಬಿಡಲಾರದೆ ಗಾಡಿ ನಿಲ್ದಾ ಣದಿಂದ ನಿಲ್ದಾಣಕ್ಕೆ ಹರಿಯಿತು, ಒಂದು ಕ್ಷಣ ಕಣ್ಣು ಕರಗಿತು. ಮರುಕ್ಷಣದಲ್ಲಿ ಕಬ್ಬಿಣವಾಯಿತು. ' ಜನತೆ ' ಎಂದವನೆ ಅಲ್ಲಿಂದ ಕಾಲ್ತೆಗೆದ.

ರಾಜೀನಾಮೆಯ ಸುದ್ದಿ ಮುಟ್ಟಿದ ಕೂಡಲೆ ಅವಳ ತಂದೆತಾಯಿ ಯರು ಮನೆಯ ಬಾಗಿಲನ್ನು ಬೇಗ ಮುಚ್ಚಿದರು, ಭದ್ರವಾಗಿ ಮುಚ್ಚಿದರು. ಬಾಗಿಲು ಬಡಿತದ ಜೋರು ಸದ್ದಿನಲ್ಲಿ ಅವಳ ಬಿಕ್ಕು ಯಾರಿಗೂ ಕೇಳಿಸಲಿಲ್ಲ.

' ಅಯ್ಯೋ ಇವನ ಹಣೇ ಬರಹ ಇಷ್ಟೇ. ನನಗೆ ಮೊದಲಿ ನಿಂದಲೂ ಗೊತ್ತಿತ್ತು, ಹೀಗಾಗುತ್ತೆ ಅಂತ ', ಎಂದರು ತಾಯಿ ಅಗುಣಿ ಹಾಕುತ್ತ.

ಅವಳ ಮದುವೆಗೆ ಒಂದು ವರ್ಷ ಮುಂಚೆ ನಡೆದ ಅಣ್ಣನ ಮದುವೆಯಲ್ಲೇ ಮತ್ತೆ ಅವನನ್ನು ಕಂಡದು. ಅಷ್ಟು ಹೊತ್ತಿಗಾಗಲೇ ಅವನು ಕಮ್ಯೂನಿಸ್ಟ್ ಎನ್ನುವ ಆರೋಪ ಬಂದಿತ್ತು. ಹೆಸರುಪಟ್ಟಿ ಅಂಟಿಸುವುದು ಜನರಿಗೆ ಪ್ರಿಯವಾದ ಒಂದು ಹವ್ಯಾಸ. ವೈ ಮೊದ

ಲಿನಿಂದಲೂ ಸೊರಗಿತ್ತು. ಒಂದು ವರ್ಷದಲ್ಲಿ ಅವನ ಮುಖದ ಮೇಲೆ ನೂರು ಗೆರೆಗಳು ಮೂಡಿದ್ದವು.

ತಾನು ಎಷ್ಟಕ್ಕೆ ಕಾರಣ ?

ಅಂದೇ ಅಣ್ಣನ ಇನ್ನೊಬ್ಬ ಗೆಳೆಯನ ಪರಿಚಯವಾದದ್ದು. ಸುಂದರ. ಒಳ್ಳೆಯ ಕೆಲಸದಲ್ಲಿದ್ದ. ಅವನು ಕಣ್ಣಿಗೆ ಬಿದ್ದ ಕೂಡಲೇ ಅವಳ ತಂದೆತಾಯಿಯರ ಮನಸ್ಸಿನಲ್ಲಿ ನಿರ್ಧಾರ ಮೂಡಿತ್ತು. ಅವನ ಕಣ್ಣಿಗೆ ಅವಳು ಬಿದ್ದ ಕೂಡಲೆ ಅವನ ಮನಸ್ಸಿನಲ್ಲೂ ನಿರ್ಧಾರ ಮೂಡಿತ್ತು. ಮಗಳನ್ನು ಹಿಂಬಾಲಿಸುತ್ತಿದ್ದ ಅವನ ದೃಷ್ಟಿಯನ್ನು ನೋಡಿ ದಾರಿ ಸುಗಮವಾಯಿತು ಎಂದುಕೊಂಡು ತಂದೆ ತಾಯಿ ಉಸಿರೆಳೆದಿದ್ದರು.

ಅವಳ ಮೇಲೆ ಅವನ ದೃಷ್ಟಿ, ಅವನ ಮೇಲೆ ಅವರ ದೃಷ್ಟಿ ಇವುಗಳನ್ನು ಕಂಡ ಪ್ರಭಾಕರ ಹೊರಡುವ ಮುನ್ನ ಅಂದ, ‘ ಸುಖವಾಗಿರು, ಎನ್ನಲಿಲ್ಲವಲ್ಲ ! ’

‘ ಸಾಧ್ಯವಾದರೆ ಸಂತೋಷವಾಗೂ ಇರು, ’ ಎಂದ. ಆದರೆ ಕಣ್ಣುಗಳಲ್ಲಿ ಅಪನಂಬಿಕೆ ಇತ್ತು.

ಅವಳ ಮದುವೆಗೆ ಅವನು ಬಂದಿರಲಿಲ್ಲ. ಎರಡು ವರ್ಷಗಳ ಕಠಿಣ ಶಿಕ್ಷೆಯನ್ನನುಭವಿಸುತ್ತಿದ್ದ ಆಗ.

ಆ ವನಿಗೇ ವಾಸಿ; ಎರಡೇ ವರ್ಷ.

ಗಂಡ ಒಳ್ಳೆಯವನು. ತನ್ನನ್ನು ಕಂಡರೆ ತುಂಬ ಪ್ರೇಮ. ಪ್ರೇಮಕ್ಕಿಂತ ಹೆಚ್ಚು ಹೆಮ್ಮೆ, ತನ್ನ ಆದರಾತಿಥ್ಯ, ಔದಾರ್ಯ. ಸುಗುಣಗಳನ್ನು ಅವನ ಸ್ನೇಹಿತರು ಹೊಗಳಿದಾಗ ಅವನಿಗೆ ಉಬ್ಬುತ್ತಿತ್ತು. ಸಮಾಜದಲ್ಲಿ ಒಂದು ಗಣ್ಯ ಸ್ಥಾನ, ಉದ್ಯೋಗದಲ್ಲಿ ಒಂದು ಉನ್ನತ ಪದವಿ ಇವುಗಳನ್ನು ಪಡೆದಿರುವುದು ಹೆಂಡತಿಯ ಸಹಕಾರದಿಂದಲೆ ಎಂದು ನಂಬಿದ್ದ. ಸ್ನೇಹಿತರು, ಕಚೇರಿ, ಕ್ಲಬ್, ಹೆಂಡತಿ, ಮಗು. ಅವನ ಸಣ್ಣ ಪ್ರಪಂಚದಲ್ಲಿ ತೃಪ್ತಿ ತುಂಬಿತ್ತು.

ತನಗೆ ಕತ್ತಲು ಹೆಚ್ಚಾದಾಗ ದಾರಿ ತೋರುತ್ತಿದ್ದವು. ಆಯಾಸಗೇರಿನಿಂದ ಸುತ್ತಲ್ಪಲ್ಪ ಒಂದು ಜೊತೆ ಬೆಂಕಿ ಕಣ್ಣುಗಳು.

ಇಷ್ಟು ಹೊತ್ತಿಗೆ ಸೆರೆಮನೆಯಲ್ಲಿ ನಿದ್ರೆ ಮಾಡುತ್ತಿರಬಹುದು. ನಿದ್ರೆ ? ಜನರ ಹರಿಯದ ನಿದ್ರೆ ಅವನ ನಿದ್ರೆಯನ್ನು ಕಸಿದು ಬಹಳ ವರ್ಷಗಳಾಗಿದ್ದುವು. ಯಾರೂ ಕಸಿಯಲಾಗದ ನಿದ್ರೆ ಬರುವತನಕ ಹೀಗೇ ನೋವಿನ ಎಚ್ಚರ.

ಏನು ಬಂದ ಹಾಗಾಯಿತು ? ನಿಜ. ಏನು ? ನಿದ್ರೆ ಹರಿದ ಕೆಲವರ ಕೃತಜ್ಞತೆ ಕಣ್ಣುಗಳು ಅಷ್ಟೆ.

*           *           *           *

‘ ಪದ್ಮಿನಿ, ನಿದ್ರೆ ಮಾಡುತ್ತಿದ್ದೀಯಾ ? ’

ಬೆಚ್ಚಿ ಎದ್ದು ಬಾಗಿಲು ತೆಗೆದಳು. ಗಂಡನ ಮುಖದ ನಗುವನ್ನು ತಾನೂ ನಿಧಾನವಾಗಿ ಪ್ರತಿಬಿಂಬಿಸಿದಳು.

‘ ಈಗ ಶಂಕರ ಹೇಳುತ್ತಿದ್ದ. ನನಗೆ ಪ್ರಮೋಷನ್ ಖಂಡಿತವಂತೆ. ಮುಂದಿನ ತಿಂಗಳು ನಿನಗೆ ಒಂದು ಹೊಸ ಸೀರೆ ! ’

ಉತ್ಸಾಹದಿಂದ ಹತ್ತಿರ ಬಂದ. ಸಿಗರೇಟಿನ ವಾಸನೆ ಜಾಜಿ ಹೂವಿನ ಸುವಾಸನೆಯನ್ನು ಹಿಮ್ಮೆಟ್ಟಿಸಿತು.

# ಫೀಡ್ರಾ

ರಾಯರು ಪಾರ್ವತಿಯನ್ನು ಮದುವೆಯಾದಾಗ ಅವಳಿಗೆ ಹದಿನಾರು ವರ್ಷ ವಯಸ್ಸು. ಪಾರ್ವತಿಯ ತಂದೆ ನರಸಿಂಹಯ್ಯನವರ ಕೇಸನ್ನು ಪರೀಕ್ಷಿಸಲು ಹಳ್ಳಿಗೆ ಬಂದ ರಾಯರು ಊರಿಗೆ ಹಿಂತಿರುಗುವಾಗ ಜೊತೆಯಲ್ಲಿ ಪಾರ್ವತಿಯನ್ನೂ ಕರೆದೊಯ್ದರು. ತಿಂಗಳ ಕಾಲ ಮನೆಯಲ್ಲಿಯೇ ನೆಲೆಸಿದ ರಾಯರ ಗಂಭೀರವಾದ ನಡವಳಿಕೆ ಮಾತುಕತೆ, ಪ್ರೌಢಿಮೆಗಳಿಗೆ ಮರುಳಾದ ನರಸಿಂಹಯ್ಯನವರು ತಮ್ಮ ನಾಲ್ಕನೆಯ ಮಗಳಾದ ಪಾರ್ವತಿಯನ್ನು ಅವರ ಮನೆಗೆ ಸೇರಿಸಬೇಕೆಂದು ಬಯಸಿದರು. ರಾಯರ ಮೊದಲನೆಯ ಹೆಂಡತಿ ಸತ್ತು ಮೂರು ವರ್ಷಗಳಾದವು, ಅವರಿಗೆ ಒಬ್ಬ ಮಗನಿದ್ದಾನೆ ಎಂಬ ವಿಷಯಗಳು ಗೊತ್ತಿದ್ದರೂ, ರಾಯರಿಗೆ ಇರುವ ಅಪಾರ ಐಶ್ವರ್ಯ, ಸಮಾಜದಲ್ಲಿನ ಗಣ್ಯಸ್ಥಾನ ಇವುಗಳನ್ನು ನೆನಪಿಗೆ ತಂದುಕೊಂಡು ಪಾರ್ವತಿಯ ತಾಯಿ ಏನು ಆಕ್ಷೇಪಣೆಗಳನ್ನೂ ತರಲಿಲ್ಲ. ತಂದೆ ತಾಯಿ ಉಪಚಾರಕ್ಕಾಗಿ ಮಗಳನ್ನು ಕೇಳಿದರು. ರಾಯರ ಭವ್ಯಾಕೃತಿ, ತಿಳಿಗೆಂಪು ಬಣ್ಣದ ಸೌಮ್ಯ ಮುಖ, ಹೆಮ್ಮೆಯಿಂದ ಸೆಟೆದು ನಿಂತ ದೊಡ್ಡ ಮೀಸೆ ಇವುಗಳನ್ನು ಕಂಡು ಆಕರ್ಷಿತಳಾಗಿದ್ದ ಪಾರ್ವತಿ ರಾಯರ ವಿಷಯವಾಗಿ ತಂದೆ ನಡೆಸಿದ ಗುಣಗಾನ, ಅವರ ಐಶ್ವರ್ಯದ ವಿಷಯವಾಗಿ ತಾಯಿ ಬಣ್ಣಿಸಿದ ಕತೆ, ಕನಸುಗಳು ಇವುಗಳಿಂದ ಉತ್ತೇಜಿತಳಾಗಿ ಸಮ್ಮತಿ ಸೂಚಿಸಿದಳು. ನರಸಿಂಹಯ್ಯನವರು ರಾಯರನ್ನು ಅವರ ಮದುವೆಯ ಬಗೆಗೆ ಸೂಕ್ಷ್ಮವಾಗಿ ಪ್ರಶ್ನಿಸಿ ನೋಡಿದರು. ಸರಿಯಾದ ಹೆಣ್ಣು ಸಿಕ್ಕಿದಲ್ಲಿ ಮದುವೆಯಾಗಲು ತನ್ನದೇನೂ ಅಡ್ಡಿಯಿಲ್ಲವೆಂದು ರಾಯರು ಉತ್ತರಿಸಿದಾಗ ಅರ್ಧ ಸಮ್ಮತಿ ಸಿಕ್ಕ

ಹಾಗೇ ಎಂದು ನರಸಿಂಹಯ್ಯನವರು ತಿಳಿದರು. ಇದಕ್ಕೆ ಕಾರಣವಿಲ್ಲ ದಿರಲಿಲ್ಲ. ತಮ್ಮ ಮಗಳ ಮೇಲೆ ರಾಯರು ಹರಿಸುತ್ತಿದ್ದ ದೃಷ್ಟಿ, ಸಂದೇಹಕ್ಕೆ ಆಸ್ಪದ ಕೊಡದಷ್ಟು ಸ್ಪಷ್ಟವಾಗಿರುತ್ತಿತ್ತು. ಪಾರ್ವತಿಯ ಮುಗ್ಧ ಸೌಂದರ್ಯ ತಾರುಣ್ಯವನ್ನು ಹಿಂದೆ ಬಿಟ್ಟ ಪಟ್ಟಣವಾಸಿ ರಾಯ ರನ್ನು ಆಕರ್ಷಿಸಿದ್ದು ಸಹಜವೇ. ಉತ್ತರದ ಉಳಿದ ಅರ್ಧ ಭಾಗ ವನ್ನು ಕೇಳಿ ತಿಳಿಯಲು ನರಸಿಂಹಯ್ಯನವರು ಹವಣಿಸಿದರು. ಒಂದು ಸಂಜೆ, ರಾಯರ ಸ್ತುತಿ, ತಮ್ಮ ತಾಪತ್ರಯ ಇವುಗಳ ದೀರ್ಘ ವರದಿ ಯಾದ ಮೇಲೆ ಅಂಜುತ್ತಲೇ ಬಿನ್ನವಿಸಿದರು, ' ನನ್ನ ಮಗಳು ಪಾರ್ವತಿಯನ್ನು ಮದುವೆಯಾಗಿ ನನ್ನ ಮನೆಯನ್ನು ಉದ್ಧರಿಸಬೇಕು ತಾವು. ' ಇಷ್ಟು ಹೊತ್ತಿಗೆ ಸಂಜೆ ರಾತ್ರಿಯಾಗಿದ್ದುದರಿಂದ ರಾಯರ ಮುಖ ಕಾಣಿಸಲಿಲ್ಲ. ಉತ್ತರ ಮಾತ್ರ ಕೇಳಿಸಿತು. ಎಂದಿನ ಅನು ದ್ವೇಗದ, ಗಂಭೀರ ಧ್ವನಿ : ' ಯೋಚಿಸಿ ಹೇಳುತ್ತೇನೆ '. ರಾಯರು ಯೋಚಿಸಲು ಕೇವಲ ಎರಡು ದಿನಗಳನ್ನು ತೆಗೆದುಕೊಂಡರು. ಮತ್ತೊಂದು ವಾರದಲ್ಲಿ ಮದುವೆ ಜರುಗಿತು. ಮದುವೆಗೆ ಬರಲು ತಮ್ಮ ಬಳಗದವರಾರೂ ಇಲ್ಲವೆಂದು ರಾಯರು ತಿಳಿಸಿದರು. ಊರಿ ನಿಂದ ಅವರ ಇಬ್ಬರು, ಮೂವರು ಸ್ನೇಹಿತರು, ಒಬ್ಬ ಗುಮಾಸ್ತೆ ಇಷ್ಟು ಜನರು ಮಾತ್ರ ಬಂದಿದ್ದರು. ರಾಯರ ಮಗ ಕ್ರಿಕೆಟ್ ಮ್ಯಾಚಿಗಾಗಿ ಬೇರೆ ಊರಿಗೆ ಹೋಗಿದ್ದರಿಂದ ಅವನೂ ಬರಲಾಗಲಿಲ್ಲ. ಮದುವೆ ಹೆಚ್ಚು ಗಲಾಟೆಯಿಲ್ಲದೆ ಹಳ್ಳಿಯ ದೇವಸ್ಥಾನದಲ್ಲಿ ನಡೆ ಯಿತು. ಆಮಂತ್ರಿತರಲ್ಲಿ ಬಹುಮಂದಿ ಪಾರ್ವತಿಯ ಭಾಗ್ಯವನ್ನು ಕೊಂಡಾಡಿದವರೇ. ಎಲ್ಲೋ ಒಬ್ಬಿಬ್ಬರು, ' ವರನಿಗೆ ವಯಸ್ಸು ಸ್ವಲ್ಪ ಹೆಚ್ಚಲ್ಲವೇ ? ' ಎಂದರು.

ಪಾರ್ವತಿ ರಾಯರ ಮನೆಯಲ್ಲಿ ನೆಲೆಸಿದ್ದಳು. ಮಗಳನ್ನು ಕಳುಹಿಸಲು ಬಂದಿದ್ದ ತಂದೆ ತಾಯಿಯರು ರಾಯರ ವಿಶಾಲವಾದ ಮನೆ, ಆಳುಕಾಳುಗಳನ್ನು ನೋಡಿ ಬೆರಗಾದರು. ಮಗಳ ಅದೃಷ್ಟ

ವನ್ನು ಕಂಡು ಸಂತೃಪ್ತರಾದರು. ಅವರು ಹಳ್ಳಿಗೆ ಹಿಂತಿರುಗುವ ಹಿಂದಿನ ದಿನ ರಾಯರ ಮಗ ಶ್ರೀಧರ ಪಂದ್ಯವನ್ನು ಮುಗಿಸಿಕೊಂಡು ಊರಿಗೆ ಬಂದ. ರಾಯರ ದೀರ್ಘ ಕಾಗದ ಅವನಿಗೆ ತಲುಪಿದ್ದರಿಂದ ಮದುವೆ ಅವನಿಗೆ ಆಶ್ಚರ್ಯಕರವಾಗಿ ಕಾಣಲಿಲ್ಲ. ರೈಲಿನಲ್ಲಿ ಹೋಗುತ್ತಿದ್ದಾಗ ಪಾರ್ವತಿಯ ತಾಯಿ ನೆಮ್ಮದಿಯಿಂದ ಗಂಡನಿಗೆ ಹೇಳಿದರು : 'ಸಧ್ಯ, ಪಾರ್ವತಿಯ ಯಜಮಾನರಿಗೆ ಚಿಕ್ಕ ಮಕ್ಕಳು ಯಾವವೂ ಇಲ್ಲವಲ್ಲ. ಈ ಹುಡುಗ ಪರವಾಗಿಲ್ಲ, ದೊಡ್ಡವನು. ತನ್ನನ್ನು ತಾನು ನೋಡಿಕೊಳ್ಳುತ್ತಾನೆ.'

ಮದುವೆಯಾದ ಮೊದಲ ಮೂರು ತಿಂಗಳು ಪಾರ್ವತಿಗೆ ಮೂರು ವಾರಗಳಂತೆ ಕಳೆದುಹೋದವು. ಆಮೇಲಿನ ಆರು ತಿಂಗಳು ಆರು ತಿಂಗಳಂತೆ ಕಳೆದವು. ವರ್ಷದ ಕಡೆಯ ಮೂರು ತಿಂಗಳುಗಳು ವರ್ಷದ ಕಾಲವನ್ನು ಆಕ್ರಮಿಸಿದವು.

ಮದುವೆಯ ಹೊಸತರಲ್ಲಿ ಕೋರ್ಟಿನ ಕೆಲಸವನ್ನು ಸ್ವಲ್ಪಮಟ್ಟಿಗೆ ನಿರ್ಲಕ್ಷಿಸಿದ್ದ ರಾಯರು ಕಾಲಕ್ರಮೇಣ ಕೆಲಸಕ್ಕೆ ಮೊದಲಿನಂತೆಯೇ ಗಮನವನ್ನು ಕೊಡಲಾರಂಭಿಸಿದರು. ಊರ ಹೊರಗಿನ ಪ್ರೇಕ್ಷಣೀಯ ಸ್ಥಳಗಳಿಗೆ ಕರೆದೊಯ್ದರು; ತಮ್ಮ ಸ್ನೇಹಿತರ ಮನೆಯವರಿಗೆ ಅವಳನ್ನು ಪರಿಚಯ ಮಾಡಿಕೊಟ್ಟರು. ರೇಡಿಯೋ ಹಾಕುವುದನ್ನು ತೋರಿಸಿಕೊಟ್ಟು ತಾವು ಕೋರ್ಟಿಗೆ, ಅಲ್ಲಿಂದ ಕ್ಲಬ್ಬಿಗೆ ಹೋದರು.

ಪಾರ್ವತಿ ಮನೆಯಲ್ಲಿ ಸ್ಥಾಪಿತಳಾದಳು. ದೊಡ್ಡ ಊರನ್ನು ಕುತೂಹಲದಿಂದ, ಉತ್ಸಾಹದಿಂದ ನೋಡಿದಳು. ರಾಯರು ಪರಿಚಯ ಮಾಡಿಕೊಟ್ಟವರ ಮನೆಗೆ ಹೋಗಿ ಬಂದಳು. ಆದರೆ ಕ್ರಮೇಣವಾಗಿ ಹೋಗುವುದನ್ನು ಕಡಿಮೆ ಮಾಡಿದಳು. ಕಡೆಗೆ ನಿಲ್ಲಿಸಿಯೇ ಬಿಟ್ಟಳು. ರಾಯರ ಸ್ನೇಹಿತರ ಪತ್ನಿಯರು ಅವಳಿಗಿಂತ ಬಹಳ ವಯಸ್ಸಾದವರು, ಬಹು ಕಾಲದಿಂದ ಪಟ್ಟಣದಲ್ಲಿ ನೆಲೆಸಿದವರು, ಅವಳ ತಂದೆ ಶ್ರೀಮಂತರಲ್ಲವೆಂಬುದನ್ನು ಬಲ್ಲವರು. ಅವರಲ್ಲಿ ಯಾರ ಸಹಾಯವೂ ಪಾರ್ವತಿಗೆ ರುಚಿಸದೆ ಹೋಯಿತು.

ಮನೆಯಲ್ಲಿ ಅಡಿಗೆಗೆ ಒಬ್ಬ ಅಡಿಗೆಯವನಿದ್ದ. ಮನೆ ಕೆಲಸಕ್ಕೆ ಇಬ್ಬರು, ಮೂವರು ಆಳುಗಳಿದ್ದರು. ಪಾರ್ವತಿಗೆ ಏನು ಕೆಲಸವನ್ನೂ ಮಾಡುವ ಅವಶ್ಯಕತೆ ಇರಲಿಲ್ಲ. ಅವಕಾಶವೂ ಇರಲಿಲ್ಲ.

ಒಂದು ದಿನ ಪಾರ್ವತಿ ರಾಯರಿಗೆ ಹೇಳಿದರು: 'ದಿನವೆಲ್ಲಾ ಒಬ್ಬಳೇ ಮನೆಯಲ್ಲಿರಬೇಕು. ಬೇಜಾರಾಗುತ್ತೆ' ಅವರಿಗೆ ಅಪರೂಪ ವಾದ ಲಘುತ್ವದಿಂದ ರಾಯರು ನುಡಿದರು : 'ನೀನೂ ನನ್ನ ಜೊತೆ ಕೋರ್ಟಿಗೆ ಬಾ. ನನ್ನ ಕೆಲಸದಲ್ಲಿ ಸಹಾಯ ಮಾಡು.' ಹಾಸ್ಯ ವನ್ನು ಗುರುತಿಸದೆ ಪಾರ್ವತಿ ಮರುನುಡಿದಳು : 'ನಾನೂ ಓದಿದೋ ಳಾಗಿದ್ರೆ ಹಾಗೆ ಮಾಡಬಹುದಾಗಿತ್ತು'. ರಾಯರು ಹಾಸ್ಯವನ್ನು ಮುಂದುವರಿಸಿದರು. 'ಈಗಲೂ ಏನಂತೆ? ದಿನಾ ಶ್ರೀಧರನ ಕೈಲಿ ಪಾಠ ಹೇಳಿಸಿಕೊ. ನಿನ್ನ ಮಗನಾದರೂ ಅವನು ನಿನಗಿಂತ ಎರಡು ವರ್ಷ ದೊಡ್ಡವನು. ಆದ್ದರಿಂದ ಚಿಕ್ಕೋನ ಕೈಲಿ ಪಾಠ ಹೇಳಿಸಿ ಕೊಳ್ಳೋದು ಹೇಗೆ ಅನ್ನೋ ಸಂಕೋಚವೂ ಇರೋದಿಲ್ಲ! ಆ ಮೇಲೆ ಕಾಲೇಜಿಗೆ ಹೋಗಿ ಓದು!' ಶ್ರೀಧರ! ಪಾರ್ವತಿಯ ಎದೆ ಬಡಿತ ಏಕೋ, ಇದ್ದಕ್ಕಿದ್ದಂತೆ ವೇಗವಾಯಿತು. ಬೇಗ ತಲೆ ಎತ್ತಿ ಗಂಡನ ಮುಖವನ್ನು ನೋಡಿದಳು. ಮುಖದ ಮೇಲಿನ ನಗುವನ್ನು ಕಂಡು ಎದೆ ಬಡಿತ ನಿಧಾನವಾಯಿತು. ತಾನೂ ನಗೆಗೂಡಿಸಿದಳು: 'ನಿಮ್ಮ ಹಾಸ್ಯವಂತೂ........!' ಹೆಂಡತಿಯ ಪ್ರತಿ ನಗುವಿನಿಂದ ರಾಯರು ಉತ್ಸಾಹಗೊಂಡರು. 'ಹೋಗಲಿ, ನಿನಗ್ಯಾಕೆ ಇಷ್ಟೆಲ್ಲ ಕಷ್ಟ? ನಾನೇ ಮನೆಯಲ್ಲಿ ಇದ್ದುಬಿಡ್ತೀನಿ. ಆಯ್ತೆ? ಆವಾಗಲಾದರೂ ನಿನ್ನ ದೂರು ತಪ್ಪುತ್ತೆ!' ಹೆಂಡತಿ ಉತ್ತರ ಕೊಡುವ ಮೊದಲೇ ಅಂದರು: 'ಆಮೇಲೆ ನೀನೇ "ಮೂರುಹೊತ್ತೂ ನಿಮ್ಮನ್ನು ನೋಡ್ತಿರಕ್ಕೆ ಬೇಜಾರಾಗುತ್ತೆ. ಕೆಲಸಕ್ಕೆ ಹೋಗಿ," ಅಂತ ಅಂತೀಯ!' ರಾಯರು ಇಷ್ಟು ಮಾತನ್ನು ಆಡಿದುದು ಪಾರ್ವತಿಗೆ ಆಶ್ಚರ್ಯವಾ ಯಿತು. ಹೀಗೆ, ಲಘುರೀತಿಯಲ್ಲ ಆಡಿದುದು ಅವಳಿಗೆ ಪ್ರಿಯವಾ

ಗಿತ್ತು. ಇನ್ನೂ ಮಾತನ್ನಾಡಬೇಕೆನಿಸಿತು. ಆದರೆ ರಾಯರು ಆಕಳಿಸಿದರು.

ಅಂದು ರಾತ್ರಿ ಪಾರ್ವತಿಗೆ ಒಂದು ಕನಸಾಯಿತು; ಅವಳು ಶ್ರೀಧರನನ್ನು ಪಾಠ ಹೇಳಿಕೊಡೆಂದು ಕೇಳುತ್ತಿದ್ದಳು. ಅವನು ನಿರುತ್ಸಾಹವನ್ನು ತೋರುತ್ತಿದ್ದ. ಅಷ್ಟು ಹೊತ್ತಿಗೆ ರಾಯರು ಬಂದರು. ಆಗ, ಏಕೋ ಏನೋ, ಶ್ರೀಧರನ ಮೇಲೆ ರೇಗಿದಳು. ಅವನು ಕೋಣೆಯನ್ನು ಬಿಟ್ಟು ಹೊರಟುಹೋದ.

ಬೆಳಗಾಗುವ ಹೊತ್ತಿಗೆ ಪಾರ್ವತಿಗೆ ಕನಸು ಮರೆತುಹೊಗಿತ್ತು.

* * * *

ದಿನದಿನಕ್ಕೆ ಪಾರ್ವತಿಯ ಬೇಸರ ಬೆಳೆಯತೊಡಗಿತು. ತೌರಿನಲ್ಲಿ ಜನ ತುಂಬಿದ ಮನೆಯಲ್ಲಿ ಇದ್ದು, ಈಗ, ಇಲ್ಲಿ ಒಬ್ಬಳೇ ಇರುವದು ಅಸಹನೀಯವಾಗುತ್ತಿತ್ತು. ಅಲ್ಲಿ ದಿನವೆಲ್ಲ ಮಾಡಿದರೂ ಮಾರನೆಯ ದಿನಕ್ಕೆ ಉಳಿಯುವಷ್ಟು ಕೆಲಸವಿರುತ್ತಿತ್ತು. ಇಲ್ಲಿ ಮುಂದಿನ ಒಂದು ವಾರದ ಕೆಲಸವನ್ನೆಲ್ಲ ಮಾಡಿದರೂ ದಿನವನ್ನು ಕಳೆಯುವುದು ದುಸ್ತರ ವಾಗುತ್ತಿತ್ತು. ಓದಲು ಪ್ರಯತ್ನಿಸಿದಳು. ರಾಯರ ವಿಶಾಲವಾದ ಕೋಣೆಯಲ್ಲಿ ರಾಶಿರಾಶಿ ಪುಸ್ತಕಗಳಿದ್ದವು. ಎಲ್ಲವೂ ವಕೀಲವೃತ್ತಿಗೆ ಸಂಬಂಧಪಟ್ಟವುಗಳಾದ್ದರಿಂದ ಪಾರ್ವತಿ ಅವುಗಳನ್ನು ಮುಟ್ಟುವು ದಕ್ಕೂ ಹೋಗಲಿಲ್ಲ. ಶ್ರೀಧರನ ಬಳಿ ಯಾವುದಾದರೂ ಕನ್ನಡದ ಕತೆ ಪುಸ್ತಕಗಳಿರಬಹುದು ಎಂದುಕೊಂಡಳು. ಆದರೆ ಅವನನ್ನು ಪ್ರಶ್ನಿಸಲು ಧೈರ್ಯ ಬರಲಿಲ್ಲ. ಹಳ್ಳಿಯಲ್ಲಿ ಬೆಳೆದವಳಿಗೆ ನಾಗರಿಕ ತರುಣನನ್ನು ಮಾತನ್ನಾಡಿಸಲು ನಾಚಿಕೆಯಾಗುತ್ತಿತ್ತು. ಶ್ರೀಧರನೂ ಹೆಚ್ಚು ಮಾತಿನವನಾಗಿರಲಿಲ್ಲ. ಹೀಗಾಗಿ ಇಬ್ಬರೂ ಒಂದೇ ಮನೆ ಯಲ್ಲಿ ನಾಲ್ಕೈದು ತಿಂಗಳಿನಿಂದ ವಾಸಿಸುತ್ತಿದ್ದರೂ ಪರಸ್ಪರ ಮಾತ ನ್ನಾಡಿದುದೇ ಕಡಿಮೆ.

ಪಾರ್ವತಿಗೆ ಶ್ರೀಧರನನ್ನು ಪ್ರಶ್ನಿಸುವ ಧೈರ್ಯವಿರಲಿಲ್ಲ. ಆದ್ದ

ರಿಂದ ಅವನು ಮನೆಯಲ್ಲಿಲ್ಲದ ಹೊತ್ತಿನಲ್ಲಿ ಅವನ ಕೊಠಡಿಯಲ್ಲೇ ಹುಡುಕಿ ನೋಡಬೇಕೆಂದು ನಿರ್ಧರಿಸಿದಳು ಅಂತೆಯೇ ಒಂದು ಮಧ್ಯಾಹ್ನ ಅವನ ಕೋಣೆಯೊಳಗೆ ಕಾಲಿಟ್ಟಳು. ಎದುರಿಗೇ ಓದುವ ಮೇಜನ್ನು ಇಡಲ್ಪಟ್ಟಿತ್ತು. ಅದರ ಮೇಲಿನ ಪುಸ್ತಕಗಳನ್ನು ಒಂದೊಂದಾಗಿ ತೆಗೆದು ನೋಡಿದಳು, ಹಾಗೇ ಜೋಡಿಸಿ ಇಡುತ್ತಾ ಬಂದಳು. ಎಲ್ಲವೂ ಇಂಗ್ಲೀಷಿನ ಪುಸ್ತಕಗಳು. ಕೆಲವದರಲ್ಲಿ ವಿಚಿತ್ರಾಕೃತಿಯ ಸೀಸೆಗಳ ಚಿತ್ರಗಳಿದ್ದವು. ಇನ್ನು ಕೆಲವದರಲ್ಲಿ ಎಲೆಗಳ, ಹೂಗಳ, ಪ್ರಾಣಿಗಳ ಚಿತ್ರಗಳಿದ್ದವು. ಒಂದೆರಡು ಸಣ್ಣ ಸಂಸ್ಕೃತದ ಪುಸ್ತಕಗಳಿದ್ದವು. ಎಲ್ಲವನ್ನೂ ಅಲ್ಲಿಯೇ ಬಿಟ್ಟು ನೋಟ್-ಬುಕ್ಕುಗಳನ್ನು ತೆಗೆದು ನೋಡಿದಳು. ಅವುಗಳಲ್ಲಿಯೂ ಏನೂ ಅರ್ಥವಾಗದಿದ್ದರೂ, ಅಚ್ಚಾದ ಪುಸ್ತಕಗಳಿಗಿಂತ ಆಸಕ್ತಿದಾಯಕವಾಗಿದ್ದವು. ಗೀಚಿದ ಕಡು ನೀಲಿ ಅಕ್ಷರಗಳನ್ನು ನೋಡಲು ಹಿತವೆನಿಸಿತು. ಒಂದು ದಪ್ಪ ರಟ್ಟಿನ ಅಗಲವಾದ ಪುಸ್ತಕದಲ್ಲಿ ಪೆನ್ಸಿಲ್ಲಿನಿಂದ ಬರೆದ ಚಿತ್ರಗಳಿದ್ದವು. ಗೀರುಗಳಿಲ್ಲದ ಪುಟದಲ್ಲಿ ಚಿತ್ರಗಳಿದ್ದವು. ಮಗ್ಗುಲಿನ ಗೆರೆ ಹಾಕಿದ ಪಟದಲ್ಲಿ ಅಕ್ಷರಗಳನ್ನು ಬರೆಯಲಾಗಿತ್ತು. ಇಲ್ಲಿಯೂ ವಿಚಿತ್ರಾಕೃತಿಯ ಸೀಸೆಗಳನ್ನು ಚಿತ್ರಿಸಲಾಗಿತ್ತು. ಇನ್ನೂ ಎರಡು ಇಂತಹವೇ ಪುಸ್ತಕಗಳಿದ್ದವು. ಅವುಗಳಲ್ಲಿನ ಚಿತ್ರಗಳಂತೂ ತೀರ ವಿಚಿತ್ರವಾಗಿದ್ದವು. ವಜ್ರ, ಕೆಂಪುಗಳನ್ನು ಹೊಳಿದ ಜಡೆಬಿಲ್ಲಿಯಂತೆ ಕಾಣಿಸುತ್ತಿದ್ದ ವರ್ತುಲಾಕೃತಿಯ ಚಿತ್ರಗಳು, ಮಂದರಿಯಂತೆ, ಚಿಂದಿ ಬಟ್ಟೆಯಂತೆ, ಒಂದರ ಮೇಲೊಂದು ಜೇಡನ ಬಲೆಯನ್ನು ಇಟ್ಟು ಹೊಲೆದಂತೆ ಕಾಣಿಸುತ್ತಿದ್ದ ಚಿತ್ರಗಳು — ಏನೇನೋ ಇದ್ದವು. ಆಶ್ಚರ್ಯದಿಂದ ಪುಟ ತಿರುವುತ್ತ ಹೋದಳು. ಖಾಲಿ ಹಾಳೆ ಸಿಕ್ಕಿತು. ಪುಸ್ತಕವನ್ನು ಮುಚ್ಚಿದಳು. ಬಿಳಿ ಹಾಳೆ ಖಾಲಿ ಹಾಸಿಗೆಯಂತಿತ್ತು. ಅವಳಿಗರಿವಿಲ್ಲದಂತೆಯೇ ಅವಳ ದೃಷ್ಟಿ ಹತ್ತಿರದಲ್ಲಿಯೇ ಇದ್ದ, ಮಂಚದತ್ತ ಧಾವಿಸಿತು. ಅಕಾರಣವಾಗಿ ಉಸಿರು ಹತ್ತಿಬಂತು. ಗಡಿಬಿಡಿಯಿಂದ ಹೊರಗೆ ಹೋದಳು.

ಆ ರಾತ್ರಿ ಪಾರ್ವತಿಗೆ ಕನಸಾಯಿತು. ಶ್ರೀಧರ ಅವನ ಕೋಣೆ ಯಲ್ಲಿ ಓದುತ್ತಾ ಕುಳಿತಿದ್ದ. ಅವಳು ಒಂದು ನೋಟ್ ಬುಕ್ಕನ್ನು ತೆಗೆದುಕೊಂಡು ಹೋಗಿ ಅವನ ಮುಂದೆ ಇಟ್ಟಳು. ಅವನು ತಲೆ ಎತ್ತಿ ನೋಡಿದ. ಪುಸ್ತಕವನ್ನು ತೆರೆದಿಟ್ಟು ಅಂದಳು : ಶ್ರೀಧರ, ಚಿತ್ರ ಬರಿ'. ಅಷ್ಟರಲ್ಲಿ ಹಿಂದಿನಿಂದ ರಾಯರ ಧ್ವನಿ ಕೇಳಿಬಂತು : ' ಪಾರ್ವತಿ, ಪಾರ್ವತಿ '. ಬೆಚ್ಚಿಬಿದ್ದು ಹಿಂದಕ್ಕೆ ಓಡಿಹೋದಳು.

ಬೆಳಿಗ್ಗೆ ಏಳುವ ಹೊತ್ತಿಗೆ ಕನಸು ಮಸುಕಾಗಿತ್ತು.

ಒಂದು ರಾತ್ರಿ ರಾಯರು ಪ್ರಸನ್ನರಾಗಿದ್ದಾಗ ಪಾರ್ವತಿ ಅವ ರನ್ನು ಕೇಳುವ ಧೈರ್ಯ ಮಾಡಿದಳು : ' ನನಗೊಂದಿಷ್ಟು ಕನ್ನಡ ಕತೆ ಪುಸ್ತಕಗಳನ್ನು ತಂದುಕೊಡಿ '. ಎಲೆ ಅಡಿಕೆಯನ್ನು ಮೆಲ್ಲುತ್ತ ರಾಯರು ಪ್ರಶ್ನಿಸಿದರು : ' ಯಾಕೆ ? ಪಾಠದ ಪುಸ್ತಕ ಬೇಜಾರಾಯಿ ತೇನು ? ' ಆಶ್ಚರ್ಯದಿಂದ ಕೇಳಿದಳು : ' ಪಾಠದ ಪುಸ್ತಕ ? ಯಾವ ಪಾಠದ ಪುಸ್ತಕ ? ' ರಾಯರು ನಕ್ಕರು : ಶ್ರೀಧರನ ಕೈಲಿ ಪಾಠ ಹೇಳಿಸಿಕೋ ಅಂತ ಹೇಳಿದೆನಲ್ಲ, ಮರೆತುಹೋಯಿತೆ ? ' ಅಡಿಕೆ ಗಂಟಲಲ್ಲಿ ಸಿಕ್ಕಿಕೊಂಡಿತು. ಜೋರಾಗಿ ಕೆಮ್ಮಿದಳು. ನೀರು ಕುಡಿದು ಹೇಳಿದಳು : ' ಅವನ ಕೈಲಿ ಹೇಳಿಸಿಕೊಂಡಹಾಗೇ ಸರಿ. ಅವನು ಮನೆಯಲ್ಲಿ ಇರೋ ಹೊತ್ತೇ ಕಡಿಮೆ, ಮೂರು ಹೊತ್ತೂ ಕ್ರಿಕೆಟ್ಟು, ಕ್ರಿಕೆಟ್ಟು ಅಂತ ಅಲೀತಾ ಇರ್ತಾನೆ. ಮನೇಲಿ ಇರೋವಾಗಲೂ ಮನೆಯೋರ ಕೈಲಿ ಆಡೋಮಾತು ಅಷ್ಟಕ್ಕಷ್ಟೆ '. ತಟ್ಟನೆ, ಆಡಿದ ಮಾತನ್ನು ಮರೆಸುವಂತೆ ಅಂದಳು : ' ಕಾಲೇಜಿಗೂ ಸರಿಯಾಗಿ ಹೋಗ್ತಾನೋ ಇಲ್ಲವೊ ? ನೀವಾದರೂ ವಿಚಾರಿಸಬಾರದೆ ? ಮನೇ ಲಂತೂ ಸ್ವಲ್ಪವೂ ಓದೋ ಹಾಗೆ ಕಾಣಿಸೋದಿಲ್ಲ. ಕಾಲೇಜಿನಲ್ಲಿ ಎಂಥೆಂಥ ಸ್ನೇಹಿತರೋ, ಎಂಥೆಂಥ ಸಹವಾಸವೋ ? ' ರಾಯರು ನೆಮ್ಮದಿಯಿಂದ ಕಾಲು ಚಾಚುತ್ತ ಅಂದರು : ' ಅವನಿಗೆ ಯಾವಾ ಗಿಂದಲೂ ಈ ಕ್ರಿಕೆಟ್ಟಿನ ಹುಚ್ಚು. ಅವರಮ್ಮ ಇದ್ದಾಗಲೂ ಹೀಗೇ

ಅಂತಿದ್ದಳು, ಹುಡುಗ ಮನೇನೇ ಸೇರಲ್ಲ, ಪಾಠ ಸರಿಯಾಗಿ ಓದೋ ದಿಲ್ಲ, ಹಾಗೆ, ಹೀಗೆ ಅಂತ. ' ಮುಂದೇನೂ ಮಾತನಾಡಲು ತಿಳಿಯದೆ ' ಆದರೂ ನೀವು ಆಗಾಗ ವಿಚಾರಿಸುತ್ತಿದ್ದರೆ ವಾಸಿ, ' ಎಂದು ಸುಮ್ಮ ನಾದಳು. ದಿಂಬಿನ ಮೇಲೆ ತಲೆಯನ್ನೂರುತ್ತ ರಾಯರು ಹೇಳಿದರು : ' ಎಷ್ಟಾದರೂ ಬೆಳೆದ ಹುಡುಗ. ನಾನೇನು ಹೇಳಲಿ, ಹೇಳು. "

ಮಾರನೆಯ ದಿನ ಊಟ ಮಾಡುತ್ತಿದ್ದಾಗ ರಾಯರು ಮಗನಿಗೆ ಹೇಳಿದರು : ' ಶ್ರೀಧರ, ಇನ್ನು ಮೇಲೆ ನಿಮ್ಮ ಕಾಲೇಜ್ ಲೈಬ್ರೆರಿ ಯಿಂದ ಕನ್ನಡ ಕತೆ ಪುಸ್ತಕಗಳನ್ನು ತೆಗೆದುಕೊಂಡು ಬಾ '. ಶ್ರೀಧರ ಆಶ್ಚರ್ಯದಿಂದ ತಲೆಯೆತ್ತಿ ನೋಡಿದ. ರಾಯರು ವಿವರಿ ಸಿದರು : ' ನಿಮ್ಮ ಚಿಕ್ಕಮ್ಮನಿಗೆ ಓದೋದಕ್ಕೆ ಬೇಕಂತೆ '.

ಅಂದು ಸಂಜೆ ಶ್ರೀಧರ ಬರುವುದನ್ನೇ ಕಾಯುತ್ತ ಕುಳಿತಳು ಪಾರ್ವತಿ. ಸೈಕಲ್ಲನ್ನು ನೂಕುತ್ತಾ ಸಿಳ್ಳು ಹಾಕುತ್ತ ಮನೆಯೊಳಗೆ ಬಂದ ಶ್ರೀಧರ. ಬಂದವನೇ ಕುರ್ಚಿಯ ಮೇಲೆ ಕುಳಿತು ತಂದೆ ಯನ್ನು ಕುರಿತು ಅಂದ : ' ಅಪ್ಪ, ಮದ್ರಾಸಿಗೆ ಹೋಗುವ ಟೀಮಿ ನಲ್ಲಿ ನಾನು ಒಬ್ಬ '. ಧ್ವನಿಯಲ್ಲಿ ಎಂದೂ ಇರದ ಉತ್ಸಾಹವಿತ್ತು. ತಂದೆ ಮಗ ಮಾತನಾಡತೊಡಗಿದರು. ಪಾರ್ವತಿ ಶ್ರೀಧರನ ಮುಖ ವನ್ನು ನೋಡತೊಡಗಿದಳು. ಹಿಂದೆಂದೂ ನೋಡದಂತೆ ನೋಡತೊ ಡಗಿದಳು. ತಂದೆಯ ಮುಖಚರ್ಯವನ್ನೇ ಹೋಲುವ ಮುಖ. ಅದೇ ಭವ್ಯಾಕೃತಿ. ಜೊತೆಗೆ ಮಾಂಸವನ್ನು ಹೊನ್ನು ಮಾಡುವ ತಾರುಣ್ಯ, ಚಿನ್ನವನ್ನು ಅಪರಂಜಿಯನ್ನಾಗಿ ಮಾಡುವ ಉತ್ಸಾಹ. ಪಾರ್ವತಿ ನೋಡಿಯೇ ನೋಡಿದಳು. ಹಾರಾಡುತ್ತಿದ್ದ ದಟ್ಟನಾದ ಕಪ್ಪು ಕೂದಲು; ನುಣ್ಣಗೆ ಬಾಚಿದ ಒಕ್ಕಾಗಿ ಬೆಳೆಯದ ಬಿಳುಪು ಮಿಶ್ರಿತ ಕೂದಲಲ್ಲ. ನುಣುಪು, ಕೆಂಪು ನಗುಮುಖ; ಗೆರೆಗೂಡಿದ ಹಸಿರು ತುಂಬಿದ ಗಂಭೀರ ಮುಖವಲ್ಲ. ಅಗಲವಾದ ಭುಜ, ಬಿಗಿ ಮಾಂಸದ ತೆಳುಮೈ; ಶರ್ಟಿನ ಮೊದಲ ಗುಂಡಿ ತೆಗೆದದ್ದರಿಂದ ಕಾಣಿ

ಸುತ್ತಿದ್ದ ಕತ್ತು, ಎದೆ; ಶರ್ಟಿನ ತೋಳುಗಳನ್ನು ಮೇಲಕ್ಕೆ ಸುತ್ತಿದ್ದರಿಂದ ಕಾಣಿಸುತ್ತಿದ್ದ ಶಕ್ತಿಯುತ ಕೈಗಳು; ಗಡಿಯಾರ, ಬಿಳಿ ಶರಾಯಿ, ಕಂದುಬಣ್ಣದ ಪಾದರಕ್ಷೆಗಳು.... ಇದ್ದಕ್ಕಿದ್ದಂತೆ ಪಾರ್ವತಿಗೆ ಗಂಟಲು ಕಟ್ಟಿದಂತಾಯ್ತು. ನೀರು ಕುಡಿಯಲು ಒಳಗೆ ಹೋದಳು. ನೀರಿನ ಬಟ್ಟಲು ಕೈಯಲ್ಲಿ ನಡುಗಿತು.

ಹಿಂತಿರುಗಿ ವರಾಂಡಕ್ಕೆ ಬಂದಾಗ ರಾಯರು ಉತ್ಸಾಹದಿಂದ ಹೇಳಿದರು. ' ಕೇಳಿದಿಯಾ ಪಾರ್ವತಿ? '— ಅವರ ವಿವರಣೆಗಳೊಂದೂ ಪಾರ್ವತಿಗೆ ಕೇಳಿಸಲಿಲ್ಲ....ಎಂ. ಸಿ. ಸಿ. ಚೆಪಾಕ್.... ಮೂರುದಿನ.... ರಾಯರು ಏನೇನೋ ಅನ್ನುತ್ತಿದ್ದರು. ಅವರು ನಿಲ್ಲಿಸುತ್ತಲೂ ನಗಲು ಪ್ರಯತ್ನಿಸುತ್ತ ಅಂದಳು : ' ಈ ಸಂಭ್ರಮದಲ್ಲಿ ನನಗೆ ಪುಸ್ತಕ ತಂದನೋ ಇಲ್ಲವೋ ? '

೨— ಅವಳೆಣಿಸಿದ್ದಂತೆಯೇ— ಪುಸ್ತಕಗಳನ್ನು ತರಲು ಮರೆತಿದ್ದ. ನಾಳೆ ತರುತ್ತೇನೆಂದು ಭರವಸೆ ಕೊಟ್ಟ. ಮಾರನೆಯ ದಿನ ತಂದೂ ಕೊಟ್ಟ. ಆದರೆ ಪುಸ್ತಕಗಳು ಮನೆಗೆ ಬರುವುದಕ್ಕೂ ಮುಂಚೆ ಇದ್ದ ಉತ್ಸಾಹ ಅವು ಬಂದ ಮೇಲೆ ಪಾರ್ವತಿಗೆ ಇರಲಿಲ್ಲ. ಮಧ್ಯಾಹ್ನ ಓದಲು ಕುಳಿತುಕೊಳ್ಳುತ್ತಿದ್ದಳು. ಮೂವತ್ತು ನಲವತ್ತು ಪುಟಗಳಷ್ಟು ಓದುವದರೊಳಗೆ ತೂಕಡಿಕೆ ಬಂದು ನಿದ್ರಿಸುತ್ತಿದ್ದಳು. ಎಷ್ಟೋ ಬಾರಿ ಪುಸ್ತಕಗಳನ್ನು ನಿಶ್ಚಿತ ಅವಧಿಯೊಳಗೆ ಹಿಂತಿರುಗಿಸಲಾಗದೆ ಶ್ರೀಧರ ವಾಚನಾಲಯಕ್ಕೆ ದಂಡ ತರಬೇಕಾಗಿ ಬರುತ್ತಿತ್ತು. ಪುಸ್ತಕಗಳನ್ನು ತರುವುದರಲ್ಲಿ ಶ್ರೀಧರ ಉದಾಸೀನನಾದ. ಏನೇನೂ ಆಸಕ್ತಿಯಿಲ್ಲದ್ದರಿಂದ ಪಾರ್ವತಿಯೂ ಒತ್ತಾಯ ಮಾಡಲಿಲ್ಲ. ರಾಯರಿಗಂತೂ ಅದರ ವಿಷಯ ಸಂಪೂರ್ಣವಾಗಿ ಮರೆತೇ ಹೋಗಿತ್ತು.

ಪಾರ್ವತಿಗೆ ಮಧ್ಯಾಹ್ನದ ನಿದ್ರೆ ಚೆನ್ನಾಗಿ ಅಭ್ಯಾಸವಾಗಿ ಹೋಯಿತು. ಊಟ ಮಾಡಿದ ಮೇಲೆ ಸಂಜೆಯ ಕಾಫೀ ತಿಂಡಿಯ ವರೆಗೂ ನಿದ್ರಿಸುತ್ತಿದ್ದಳು. ಮೊದಲು ಮೊದಲು ಎದ್ದ ಮೇಲೆ ಭಯಂ

ಕರವಾದ ತಲೆನೋವು, ಅದಕ್ಕಿಂತ ಭಯಂಕರವಾದ ಶೂನ್ಯದ ಅರಿವು ಅವಳನ್ನಾವರಿಸುತ್ತಿದ್ದವು. ಕಾಲಕ್ರಮೇಣ ತಲೆನೋವು ಬರುವುದು ನಿಂತಿತು. ಮಧ್ಯಾಹ್ನದ ನಿದ್ರೆಯಿಂದ ರಾತ್ರಿ ಚೆನ್ನಾಗಿ ನಿದ್ರೆ ಬರುತ್ತಿರಲಿಲ್ಲ. ಇವೆಲ್ಲವನ್ನು ನಿಲ್ಲಿಸಲು ಮಧ್ಯಾಹ್ನ ನಿದ್ರೆ ಮಾಡಬಾರದೆಂದು ನಿರ್ಧರಿಸಿದಳು. ಅಭ್ಯಾಸಬಲದ ಮೇಲೆ ನಿದ್ರೆ ಬಂತು. ಮಾಡಲು ಬೇರೆ ಏನೂ ಕೆಲಸವಿಲ್ಲದ್ದರಿಂದ ಅವಳು ಪ್ರತಿಭಟನೆಯನ್ನು ತೋರಲಿಲ್ಲ.

ಶ್ರೀಧರ ಮದ್ರಾಸಿಗೆ ಹೋಗುವುದಕ್ಕೆ ಸ್ವಲ್ಪ ದಿನ ಮುಂಚೆ ಅವನ ಕಾಲೇಜಿನಲ್ಲಿ ಒಂದು ಸಮಾರಂಭ ನಡೆಯಿತು. ರಾಯರು ಪತ್ನಿಯೊಡಗೂಡಿ ಹೋದರು. ಪಾರ್ವತಿ ಕಾಲೇಜನ್ನು ಕಂಡುದು ಅದೇ ಮೊದಲು. ಆಸಕ್ತಿಯಿಂದ ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನೂ ಆಮಂತ್ರಿತರನ್ನೂ ನೋಡತೊಡಗಿದಳು. ವಿದ್ಯಾರ್ಥಿ ವಿದ್ಯಾರ್ಥಿನಿಯರ ಕಾರ್ಯಕಲಾಪಗಳ ವರದಿಯನ್ನು ಕೇಳಿದಾಗ, ಅವರ ನಿರಾತಂಕದ ಉಲ್ಲಾಸನೀಯ ಪ್ರವೃತ್ತಿಗಳನ್ನು ಗಮನಿಸಿದಾಗ, ಆಸಕ್ತಿ, ಅಸೂಯೆಗೆ ಹೊರಳಿತು ಎಲ್ಲಾ ಸುಮಾರು ತನ್ನ ವಯಸ್ಸಿನವರೇ. ಆದರೆ ತಾನಿಲ್ಲಿ. ಆಮಂತ್ರಿತರ ನಡುವೆ. ತಂದೆ ತಾಯಿಯರ ಗುಂಪಿನಲ್ಲಿ. ತನ್ನ ತಂದೆಯೂ ಈ ಊರಿನಲ್ಲಿದ್ದಿದ್ದರೆ, ಹಣವಂತರಾಗಿದ್ದರೆ, ತನಗೆ ಮದುವೆಯಾಗಿರದಿದ್ದರೆ, ಆಗಿದ್ದರೂ ಇವರಿಗಾಗಿರದಿದ್ದರೆ, ತಾನೂ ಹುಡುಗಿಯರ ಜೊತೆ ನಲಿಯಬಹುದಾಗಿತ್ತು.... ಜೋರಾಗಿ ಕೇಳಿಬಂದ ಕರತಾಡನದಿಂದ ಬೆಚ್ಚಿ ಎದುರಿಗೆ ನೋಡಿದಳು. ಮತ್ತೆ ಬೆಚ್ಚುವಂತಾಯ್ತು. ವೇದಿಕೆಯ ಮೇಲೆ ಶ್ರೀಧರ ಸಭಾಧ್ಯಕ್ಷರಿಂದ ಪಾರಿತೋಷಕಗಳನ್ನು ಸ್ವೀಕರಿಸುತ್ತ ನಿಂತಿದ್ದ. ಹುಡುಗ ಹುಡುಗಿಯರೆಲ್ಲರೂ ಜೋರಾಗಿ ಚಪ್ಪಾಳೆ ಹೊಡೆಯುತ್ತಿದ್ದರು. ಅವನ ಹೆಸರನ್ನು ಅಮಿತೋತ್ಸಾಹದಿಂದ ಕೂಗುತ್ತಿದ್ದರು. ಶ್ರೀಧರ ನಸುನಗುತ್ತ ಅಧ್ಯಕ್ಷರಿಗೊಮ್ಮೆ, ಸಭೆಗೊಮ್ಮೆ ನಮಸ್ಕರಿಸಿ ಕೆಳಗಿಳಿದು ಬಂದು, ಗೆಳೆಯರ ಗುಂಪಿನಲ್ಲಿ ಮರೆಯಾದ.

ಮನೆಗೆ ಬರುವಾಗ ಪಾರ್ವತಿ ಎಂದಿಗಿಂತ ಮೌನಳಾಗಿದ್ದಳು. ಮಗನ ಗೆಲುವಿನಿಂದ. ಹುರುಪುಗೊಂಡ ರಾಯರು ಹೆಮ್ಮೆಯಿಂದ ಮಾತನ್ನಾಡುತ್ತಿದ್ದರು. ಪಾರ್ವತಿಗೆ ಅವರನ್ನು, ಸುಮ್ಮನಿರಿ ದಯವಿಟ್ಟು. ನಾನು ಕೇಳಲಾರೆ, ಎಂದು ಬೇಡಿಕೊಳ್ಳಬೇಕೆನಿಸಿತು. ಅತಿ ಪ್ರಯಾಸದಿಂದ, ಮಾತನ್ನಾಡದೆ ಹೊಂಗುಡುತ್ತಾ ಬಂದಳು.

ಪಾರ್ವತಿಯ ಬೇಸರ ಬೆಳೆದಂತೆ ಖಿನ್ನತೆಯೂ ಹೆಚ್ಚಾಗುತ್ತ ಬಂದಿತು. ಮೊದಲೇ ಮಿತಭಾಷಿಣಿಯಾಗಿದ್ದವಳು ಈಗ ಮೌನಿಯಾದಳು. ಊಟ ತಿಂಡಿಗಳ ಮೇಲೆ, ಉಡಿಗೆ ತೊಡಿಗೆಗಳ ಮೇಲೆ ಆಸಕ್ತಿ ಕಡಿಮೆಯಾಗಿ ಹೋಯಿತು. ಬೆಳಗ್ಗೆ, ಸಂಜೆ ಹಾಸಿಗೆಯಿಂದ ಏಳಬೇಕಾದರೆ ಅವಳಿಗೆ ಬೇಜಾರಾಗುತ್ತಿತ್ತು.

* * *

ಶ್ರೀಧರ ಮದ್ರಾಸಿಗೆ ಹೊರಟ ದಿನ ಅವನ ಜೊತೆ ರಾಯರೂ ನಿಲ್ದಾಣಕ್ಕೆ ಹೊರಟರು. ಹೊರಡುವುದಕ್ಕೆ ಮುಂಚೆ ತಾನೂ ಅವರೊಡನೆ ಬರುತ್ತೇನೆಂದು ಹೇಳಿದ್ದರೂ, ಹೊರಡುವುದಕ್ಕೆ ಸ್ವಲ್ಪ ಹೊತ್ತಿಗೆ ಮುಂಚೆ ತಾನು ಬರುವುದಿಲ್ಲವೆಂದು ತಿಳಿಸಿದಳು; ರಾಯರಿಗಾಗಲಿ, ಶ್ರೀಧರನಿಗಾಗಲಿ ಪಾರ್ವತಿಯ ನಡವಳಿಕೆ ಅರ್ಥವಾಗಲಿಲ್ಲ. ಆದರೆ ಕಾರಣವನ್ನು ಕೇಳುವುದಕ್ಕೆ ಸಮಯವಿಲ್ಲದ್ದರಿಂದ ಅವರಿಬ್ಬರೂ ಹೊರಟು ಹೋದರು. ಕಾರು ಕಣ್ಮರೆಯಾದ ಮೇಲೆ ಕೊಠಡಿಗೆ ಬಂದು ಪಾರ್ವತಿ ಅತ್ತಳು. ಕಾರಣ ಗೊತ್ತಿಲ್ಲದೆಯೇ ಬಿಕ್ಕಿ ಅತ್ತಳು.

ಪಂದ್ಯದ ವರದಿಯನ್ನು ರಾಯರು ರೇಡಿಯೋದಲ್ಲಿ ತಪ್ಪದೆ ಕೇಳುತ್ತಿದ್ದರು. ಅರ್ಥವಾಗದಿದ್ದರೂ ಪಾರ್ವತಿ ಅಲ್ಲಿಯೇ ಕುಳಿತಿರುತ್ತಿದ್ದಳು. ರಾಯರು ಆಗಾಗ ಏನನ್ನಾದರೂ ವಿವರಿಸುತ್ತಿದ್ದರು. ವರದಿಯಲ್ಲಿ ಶ್ರೀಧರನ ಹೆಸರು ಬಂದಾಗ ಪಾರ್ವತಿಗೆ ಅರ್ಥವಾಗುತ್ತಿತ್ತು. ಅವನು ಔಟಾದನೆಂದು ರಾಯರು ಹೇಳಿದಾಗ ಒಳಗೆ ಎದ್ದು ಹೋಗುತ್ತಿದ್ದಳು.

ಶ್ರೀಧರ ಮದ್ರಾಸಿನಿಂದ ಹಿಂತಿರುಗಿ ಬಂದ ದಿನ ಬೆಳಗ್ಗಿನಿಂದ ಪಾರ್ವತಿಗೆ ಅಸ್ವಾಸ್ಥ್ಯ. ಮನಸ್ಸಿನಲ್ಲಿ ಏನೋ ಅಶಾಂತಿ, ತಳಮಳ. ರೈಲು ಬರುವ ಹೊತ್ತಿಗೆ ದಕ್ಷತೆಯಿಂದ ಅಲಂಕಾರ ಮಾಡಿಕೊಂಡಳು. ಏಕೋ ಮತ್ತೆ ಮುದುಡಿ ಕುಳಿತಳು. ಮತ್ತೆ ಅರಳಿದಳು. ಮತ್ತೆ ಮುದುಡಿದಳು. ಶ್ರೀಧರ ಬಂದವನೇ ಅವಳನ್ನು ನೋಡಿ : ಏಕೆ, ಮೈಗೆ ಸರಿಯಾಗಿಲ್ಲವೆ ? ಎಂದು ಕೇಳಿದ. ಪ್ರಶ್ನೆ-ಶ್ರೀಧರನಿಂದ ಬಂದದ್ದರಿಂದ— ಬಾಡಿದ ಸಸಿಗೆ ನೀರೆರೆಯಿತು. ಅಂದಿನ ದಿನವೆಲ್ಲ ಪಾರ್ವತಿಯ ಉಲ್ಲಾಸಕ್ಕೆ ಮೇರೆಯೇ ಇರಲಿಲ್ಲ.

ರಾತ್ರಿಯಲ್ಲಲ್ಲದೆ ಮಧ್ಯಾಹ್ನಗಳಲ್ಲೂ ಕನಸುಗಳು ಕಾಡಲಾರಂಭಿಸಿದವು : ತಾನು ಹೊಸ ಹಸಿರು ಹುಲ್ಲುಗಾವಲಿನಲ್ಲಿ ಆಡಲು ಅಪೇಕ್ಷಿಸಿ ಅದರೆಡೆಗೆ ನಡೆಯತೊಡಗಿದಂತೆ, ನಿಂತಿದ್ದ ಒರಟು ನೆಲದಿಂದ 'ಪಾರ್ವತಿ' ಎಂದು ಒಂದು ಧ್ವನಿ ಗರ್ಜಿಸಿದಂತೆ. ಬೆಳದಿಂಗಳಿನಲ್ಲಿ ಮೀಯಲು ಓಡಿದಂತೆ, ಮನೆಯೊಳಗಿಂದ ಯಾರೋ ಸೆರಗನ್ನು ಹಿಡಿದು ನಿಲ್ಲಿಸಿದಂತೆ....

ಕನಸುಗಳಿಗೆ ಹೆದರಿ ಪಾರ್ವತಿ ನಿದ್ರೆ ಮಾಡುವುದಕ್ಕೇ ಇಷ್ಟ ಪಡುತ್ತಿರಲಿಲ್ಲ.

ಹೆಂಡತಿಯ ಖಿನ್ನತೆ ರಾಯರ ಗಮನಕ್ಕೆ ಬಾರದೆ ಇರಲಿಲ್ಲ. ಕಾರಣವನ್ನು ಕೇಳುತ್ತಿದ್ದರು. 'ಏನಿಲ್ಲ, ಈ ಸೆಕೆಗೆ ತಲೆನೋವು,' ಎಂದು ಸುಮ್ಮನಾಗುತ್ತಿದ್ದಳು. ರಾಯರು ಉತ್ತರದಿಂದ ತೃಪ್ತಿ ಹೊಂದುತ್ತಿದ್ದರು. 'ಇನ್ನೇನು ಬೇಸಿಗೆ ಮುಗಿಯುತ್ತ ಬಂತು,' ಎಂದು ಒಂದು ವಾಕ್ಯದಲ್ಲೇ ಸಮಾಧಾನವನ್ನು ನೀಡುತ್ತಿದ್ದರು.

ಒಂದು ದಿನ ಮಧ್ಯಾಹ್ನ ಶ್ರೀಧರ ಅಕಸ್ಮಾತ್ತಾಗಿ ಮನೆಗೆ ಬಂದವನು ವರಾಂಡದ ಆರಾಮ ಕುರ್ಚಿಯ ಮೇಲೆ ಮಲಗಿದ್ದ ಪಾರ್ವತಿಯನ್ನು ಕಂಡು ಘಾಬರಿಯಾದ. ಅವಳ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ತನ್ನ ದಿನದ ಪದ್ಧತಿಯಂತೆ ಸುಮ್ಮನೆ ಒಳಗೆ ಹೋಗದೆ 'ಏಕೆ ? ಏಕೆ ಅಳುತ್ತಿದ್ದೀರಿ?', ಎಂದ. ಪಾರ್ವತಿಯ

ಅಳು ಹೆಚ್ಚಾಯಿತು. ಈಚೆಗೆ ಅವಳಿಗೆ ಕಾರಣವಿಲ್ಲದೆ ಕಣ್ಣು ತುಂಬಿ ಬರುತ್ತಿತ್ತು. ಎಷ್ಟು ಪ್ರಯತ್ನ ಪಟ್ಟರೂ ತಡೆಯದೆ ತುಂಬಿ ಹರಿಯುತ್ತಿತ್ತು. ಶ್ರೀಧರನ ಅನಿರೀಕ್ಷಿತ, ಔಪಚಾರಿಕ ಪ್ರಶ್ನೆಯಿಂದ ಪಾರ್ವತಿಗೆ ಆಶ್ಚರ್ಯವಾಯಿತು. ಆನಂದವಾಯಿತು, ಸಂಕಟವೂ ಆಯಿತು. ಮತ್ತೆ ಅತ್ತಳು.

ಪಾರ್ವತಿ ದಿನದಿನಕ್ಕೆ ಬಡವಾಗುತ್ತಿರುವುದನ್ನು ನೋಡಿ ಘಾಬರಿಗೊಂಡ ರಾಯರು ತಮ್ಮ ಗುಮಾಸ್ತೆಯೊಬ್ಬನ ಜೊತೆ ಮಾಡಿ ಅವಳನ್ನು ಹಳ್ಳಿಗೆ ಕಳುಹಿಸಿ ಕೊಟ್ಟರು. ಅಲ್ಲಿ ಹೆಚ್ಚು ದಿನ ನಿಲ್ಲಲಾರದೆ ಪಾರ್ವತಿ ಮತ್ತೆ ಊರಿಗೆ ಬಂದಳು. ಎರಡು ದಿನ ನಗು ನಗುತ್ತಿದ್ದಳು. ಮತ್ತೆ ಮ್ಲಾನವುುಖಿಯಾದಳು.

ಶ್ರೀಧರ ಸಂಜೆ ಮನೆಗೆ ಬರುವ ಹೊತ್ತಿಗೆ ಅಲಂಕರಿಸಿಕೊಳ್ಳುತ್ತಿದ್ದಳು, ಮತ್ತೆ ಅಲಂಕಾರವನ್ನೆಲ್ಲಾ ಕೆಡಿಸಿ ಅಳುತ್ತ ಮಲಗುತ್ತಿದ್ದಳು. ಒಂದೊಂದು ದಿನ ಗಂಡನ ಜೊತೆಗೆ ತುಂಬ ಮಾತನಾಡುತ್ತಿದ್ದಳು. ಮತ್ತೆ ಕೆಲವು ದಿನ ಅವರು ಮಾತನ್ನಾಡಿಸಿದರೂ ಉತ್ತರ ಕೊಡುತ್ತಿರಲಿಲ್ಲ.

ಶ್ರೀಧರನ ಹುಟ್ಟಿದ ಹಬ್ಬದ ದಿನ ಪಾರ್ವತಿಯ ಮನಸ್ಸು ಪ್ರಸನ್ನವಾಗಿತ್ತು. ಅಡಿಗೆಯವನು ಎಷ್ಟು ಬೇಡವೆಂದರೂ ಕೇಳದೆ ಅಡಿಗೆಗೆ ನೆರವಾದಳು. ಗಂಡನೊಡನೆ ಸರಸದಿಂದಿದ್ದಳು. ಊಟಕ್ಕೆ ಕುಳಿತಾಗ ಮಾತು ಹೂವುಗಳ ಕಡೆ ಹರಿಯಿತು. ಅತಿಥಿಗಳಾಗಿ ಬಂದಿದ್ದ ಶ್ರೀಧರನ ಸ್ನೇಹಿತರು ತಮ್ಮ ತಮ್ಮ ಮೆಚ್ಚಿನ ಹೂಗಳ ಹೆಸರುಗಳನ್ನು ತಿಳಿಯಪಡಿಸಿದರು. ಶ್ರೀಧರ ತನ್ನ ಮೆಚ್ಚಿಗೆಯ ಹೂವು ಶಾವಂತಿಗೆ ಎಂದ. ರಾಯರು ಕೇದಿಗೆ ಎಂದರು. ಪಾರ್ವತಿಯನ್ನು ಯಾರೂ ಕೇಳಲಿಲ್ಲ

ಅಂದು ರಾತ್ರಿ ಕನಸಿನಲ್ಲಿ ಪಾರ್ವತಿ ಮೃದುವಾದ ಹಳದಿ ಸೀರೆ, ರವಿಕೆಗಳನ್ನು ಧರಿಸಿದ್ದಳು. ಹೆರಳು ಹಾಕಿಕೊಂಡು ತಲೆಯ ತುಂಬ

ಹಳದಿ ಶಾವಂತಿಗೆಯ ಮಾಲೆಯನ್ನು ಮುಡಿದಿದ್ದಳು. ಅವಳು ದಿಟ್ಟಿಸುತ್ತಿದ್ದ ದಿಕ್ಕಿನಿಂದ ಬಂದ ಶ್ರೀಧರ. ಹತ್ತಿರ ಬಂದು ಉಸುರಿದ: 'ಸೇವಂತಿ, ಸೇವಂತಿ'. ಕೈ ಚಾಚಿದ. ಹಳದಿ ಸೀರೆ ಸುತ್ತಿದ್ದ ತೆಳು ಮೈ ಮೃದು ಚಲನದಿಂದ ಮುಂಪೆ ಸರಿಯಿತು. ಚಾಚಿದ ಕೈಗಳಲ್ಲಿ ಸೆರೆಯಾಗುವುದರಲ್ಲಿತ್ತು. ಮೇಲಿನಿಂದ ಬೀಸಿ ಬಂದ ಹಳದಿ ಪಾಶವೊಂದು ಅವಳನ್ನು ತಡೆದು ನಿಲ್ಲಿಸಿತು. ಪಾಶದ ಅಂಚಿನ ತೀಕ್ಷ್ಣವಾದ ಹಲ್ಲುಗಳು ಮೈಯನ್ನು ಚುಚ್ಚಿದವು. ಅದರ ಉತ್ಕಟ ಸುಗಂಧ, ಮೂರ್ಛೆಗೆ ಕಾರಣವಾಯಿತು.

ಬೆಳಗಾದರೂ ಪಾರ್ವತಿಗೆ ಕನಸನ್ನು ಮರೆಯಲಾಗಲಿಲ್ಲ.

ಶ್ರೀಧರ ತನ್ನನ್ನು ಕಂಡರೆ ಮೊದಲಿನಷ್ಟು ನಾಚಿಕೆಪಟ್ಟುಕೊಳ್ಳುತ್ತಿರಲಿಲ್ಲವೇನೋ ಎನಿಸಿತು ಪಾರ್ವತಿಗೆ. ಮಾತನ್ನಾಡುವಾಗ ಮೊದಲಿನಷ್ಟು ಸಂಕೋಚವಿರುತ್ತಿರಲಿಲ್ಲ ಎನಿಸುತ್ತಿತ್ತು. ಇದಕ್ಕೆ ಸವಿಯಾದ ಕಾರಣಗಳು ಹೊಳೆಯತೊಡಗಿದವು. ಮತ್ತೆ ಪಾರ್ವತಿ—ಮದುವೆಯ ಮೊದಲ ದಿನಗಳಲ್ಲಿನಂತೆ— ಜಾಗರೂಕತೆಯಿಂದ ಸಿಂಗರಿಸಿಕೊಳ್ಳಲು ಪ್ರಾರಂಭಿಸಿದಳು. ನಗು ಮತ್ತೆ ಅವಳ ಪರಿಚಯವನ್ನು ಮಾಡಿಕೊಳ್ಳತೊಡಗಿತು. ರಾಯರ ಸಹವಾಸ, ಸಾನ್ನಿಧ್ಯ ಮೊದಲಿಗಿಂತ ಅಸಹನೀಯವಾಗುತ್ತ ಬಂತು. ಆದರೂ ಯಾವುದೋ ಒಂದು ಅವ್ಯಕ್ತವಾದ ಆಸೆ ಅಸಹನೆಯನ್ನು ಬಂಧಿಸಿ, ಬಾಯಿಕಟ್ಟಿ, ನೆಲಮಾಳಿಗೆಯಲ್ಲಿ ಸೆರೆ ಇಟ್ಟಿತು.

ಒಂದು ದಿನ ಮಧ್ಯಾಹ್ನ ಪಾರ್ವತಿ ಎಂದಿನಂತೆ ನಿದ್ರಿಸುತ್ತಿದ್ದಳು. ಕೋಣೆಯ ಬಾಗಿಲಿನಲ್ಲಿ ಶ್ರೀಧರ ಬಂದು ನಿಂತಂತಾಯಿತು. ಇಷ್ಟು ಹೊತ್ತಿನಲ್ಲಿ ಏಕೆ ಬಂದ ಎಂದು ಯೋಚಿಸುವಷ್ಟರಲ್ಲಿ ಅವನು ಕೋಣೆಯೊಳಗೆ ಒಂದು ಹೆಜ್ಜೆಯಿಟ್ಟಿದ್ದ. ಆಶ್ಚರ್ಯಚಕಿತಳಾಗಿ, ಎದ್ದು ಕುಳಿತುಕೊಳ್ಳಬೇಕೆಂದು ಯತ್ನಿಸಿದಳು. ದೇಹ ಅವಳ ಮಾತನ್ನು ಕೇಳಲಿಲ್ಲ. ಬದಲು, ಮಲಗಿದ್ದಂತೆಯೇ ಒಂದು ಬಾರಿ ಹೊರಳಿತು.

ಅವಳ ಮುಖ ಅವನೆಡೆಗೆ ತಿರುಗಿತು. ಅವನು ಅವಳನ್ನೇ ನೋಡುತ್ತ ಮುಂದೆ ಬರುತ್ತಿದ್ದ. ಅವಳಿಗೆ ಭಯವೆನಿಸಲಿಲ್ಲ. ವರ್ಣನಾತೀತ ತೃಪ್ತಿ, ಆನಂದ ಅವಳಲ್ಲಿತ್ತು. ಅವನು ಮುಂದೆ ಬರುವುದನ್ನೇ ನೋಡುತ್ತ ಮಲಗಿದ್ದಳು. ತುಟಿಗಳ ಮೇಲೆ ಆಹ್ವಾನದ, ಹೆಮ್ಮೆಯ ನಗು ಹಬ್ಬಿತ್ತು. ಮೈ ಕ್ಷಣ ಕ್ಷಣಕ್ಕೂ ಮೃದುವಾದಂತೆನಿಸುತ್ತಿತ್ತು. ಧರಿಸಿದ ಬಟ್ಟೆಗಳು ಸಡಿಲವಾಗುತ್ತಿದ್ದಂತೆ ಭಾಸವಾಯಿತು. ಅವನು ಹತ್ತಿರ ಬಂದ. ಇಬ್ಬರೂ ಒಟ್ಟಿಗೆ ಕೈ ಚಾಚಿದರು. ಮಿಂಚು ಮಾಯವಾಗುವ ಮೊದಲೇ ಸಿಡಿಲು ಕೇಳಿಬಂತು. ‘ ಪಾ-ರ್ವ-ತಿ! ’ ಯಾರೋ ಕೂಗಿದರು. ಸಿಡಿಲಿನ ಬೆನ್ನಿಗೇ ಗುಡುಗುಗಳ ಸಾಲು ಶಸ್ತ್ರ ಸಜ್ಜಿತ ಹಡಗುಗಳ ಗುಂಪಿನಂತೆ ಧಾವಿಸಿ ಬಂತು. ಗುಡುಗು ಗಳು ಮಾನವ ಕಂಠದಲ್ಲಿ ರೂಪಿತವಾದವು. ತಾಯಿ, ತಂದೆ, ಗಂಡ, ಎಲ್ಲರೂ ಕೂಗಿಕೊಂಡರು, ಬೇಡಿಕೊಂಡರು, ಶಾಪ ಹಾಕಿದರು : ‘ ಪಾ–ರ್ವ–ತಿ ! ’ ಬೆಚ್ಚಿ ಕೈಯನ್ನು ಹಿಂತೆಗೆದಳು. ಎದುರು ದಿಕ್ಕಿನಿಂದ, ಅವನು ನಿಂತ ದಿಕ್ಕಿನಿಂದ, ಹೊಸದೊಂದು ಧ್ವನಿ ಕೇಳಿ ಬಂತು: ‘ ಪಾರ್ವತಿ ! ’ ಬೆಳ್ಳಿ ಬಳಿದ ಕೊಂಬೆಯಂತೆ, ಹೊಂಬಣ್ಣದ ರೇಶಿಮೆ ನೂಲಿನಂತೆ, ಚಂದ್ರ ಕಿರಣದಂತೆ ಹೊಳೆಯತೊಡಗಿತು ಧ್ವನಿ, ಕೂಗ ತೊಡಗಿತು ಧ್ವನಿ : ‘ ಪಾರ್ವತಿ ! ’ ಕೈಯನ್ನು ಮತ್ತೆ ಮುಂದೆ ಚಾಚಿದಳು. ಹಿಂದಿನಿಂದ ಬಂಡೆ ಸೀಳಿದಂತೆ, ಸೀಳಿ ಸಮುದ್ರಕ್ಕೆ ಬಿದ್ದಂತೆ. ಸಮುದ್ರ ಚೀತ್ಕರಿಸಿದಂತೆ ಕೇಳಿ ಬಂತು ಧ್ವನಿಗಳ ಮೇಳ. ಎರಡು ದಿಕ್ಕಿನಿಂದ ಬಂದ ಧ್ವನಿಗಳೂ ಹೊಯ್ದಾಡತೊಡಗಿದವು. ಮುಂದಿನ ಧ್ವನಿಯನ್ನು ಆಲಿಸಿದಳು. ಒಲವಿನ ಅಧಿಕಾರ ದಿಂದ, ಬಯಕೆಯ ಕಾತುರದಿಂದ, ಮಾರ್ದವದ ನುಣುಪಿನಿಂದ ರೂಪಿ ತವಾದ ಧ್ವನಿ ಕೇಳಿ ಬಂತು; ‘ ಪಾರ್ವತಿ ! ’ ಅವನ ಧ್ವನಿಯಷ್ಟೆ ಅದು ? ಕೈ ಮುಂದೆ ನುಗ್ಗಿತು. ಅವನ ಕೈ ಪ್ರತಿವೇಗದಿಂದ ಅವ ಳನ್ನು ಸೇರಿತು. ಧ್ವನಿ ಮತ್ತೊಮ್ಮೆ ಅಂದಿತು. ‘ ಪಾ ರ್ವ ತಿ ! ’ ಅವಳು ಬೆಚ್ಚಿದಳು. ಧ್ವನಿ ಅವನದಾಗಿರಲಿಲ್ಲ. ತನ್ನದೇ ! ಹಿಂದಿನ

ದಪ್ಪ, ಕಪ್ಪು ಧ್ವನಿಗಳನ್ನು ಭೇದಿಸಿಕೊಂಡು ಭಯಗೊಂಡ, ಆಘಾತ ಗೊಂಡ, ಆವಳ ಧ್ವನಿ ಚೀರಿತು.

ಚೀರಿದ ಧ್ವನಿಗೆ ಬೆದರಿ ಕಣ್ತೆರೆದು ನೋಡಿದಳು. ದೇಹ ಕಂಪಿಸುತ್ತಿತ್ತು. ಮುಖ ಬೆವರಿತ್ತು. ಮೈ ಮೇಲಿನ ಬಟ್ಟೆಗಳು ಮುದುಡಿದ್ದವು. ತಲೆಯಲ್ಲಿ ಒಂದು ಪ್ರಶ್ನಾರ್ಥದ ಚಿಹ್ನೆ ಬಂದು ನೆಲಸಿತು. ಹೌಹಾರಿ ಬಾಗಿಲಿನತ್ತ ನೋಡಿದಳು. ಶ್ರೀಧರ ಕಣ್ಣಿಗೆ ಬಿದ್ದ. ನಿಜ ! ಪಾರ್ವತಿ ಚೀರಿದಳು. ಆಗತಾನೆ ವರಾಂಡಕ್ಕೆ ಕಾಲಿಟ್ಟಿದ್ದ ರಾಯರು ಓಡಿ ಬಂದರು. ಪ್ರಶ್ನೆ ಬರುವ ಮೊದಲೇ ಪಾರ್ವತಿ ಬಿಕ್ಕಿದಳು. ' ಶ್ರೀಧರ— ಈಗ ಕೋಣೆಗೆ ಬಂದಿದ್ದ— ನನ್ನ ಮಾನ–ಓ–ಓ– ! ' ಇಷ್ಟು ಹೇಳಿ ಕುಸಿದಳು. ಬಚ್ಚಲ ಮನೆ ಯಿಂದ ಓಡಿ ಬಂದ ಶ್ರೀಧರ ತಂದೆಯ ಮುಖವನ್ನು ನೋಡಿ ಸ್ತಂಭಿತ ನಾಗಿ ನಿಂತುಬಿಟ್ಟ.

ರಾಯರ ರೋಷ ನಾಲಿಗೆಯನ್ನು ತೊದಲಿಸಿತು. ' ಹೊರಡು ಮನೆ ಬಿಟ್ಟು–ಪಾಪಿ– ನಿನಗಿಂತ ಚಿಕ್ಕೋಳಾದ್ರೂ ನಿನ್ನ ತಾಯಿಯಲ್ಲ ವೇನೋ ?— ತೊಲಗಾಚೆ– ಕಣ್ಣೆದುರಿಗೆ ನಿಲ್ಲಬೇಡ. ' ಮಗನ ಕುತ್ತಿ ಗೆಗೆ ಕೈ ಹಾಕಿ ಆಚೆಗೆ ನೂಕಿ ಬೀದಿ ಬಾಗಿಲು ಹಾಕಿದರು. ಅವರ ಕಣ್ಣು ಕೆಂಡವಾಗಿತ್ತು. ಮೈ ನಡುಗುತ್ತಿತ್ತು. ಕೋಣೆಯ ಬಾಗಿಲಿಗೆ ಬಂದರು. ಪಾರ್ವತಿ ಮಂಚದ ಬಳಿ ಮುದುಡಿಕೊಂಡು ಬಿದ್ದಿದ್ದಳು. ಅವಳೆಡೆಗೆ ನೋಡದೆಯೇ ಹೊರಗೆ ಹೊರಟು ಹೋಗಬೇಕೆನಿಸಿತು. ಮನಸ್ಸನ್ನು ಗಟ್ಟಿಮಾಡಿಕೊಂಡು ಹತ್ತಿರ ಹೋದರು. ಧ್ವನಿಯ ಲ್ಲಿನ ಕಬ್ಬಿಣವನ್ನು ಆದಷ್ಟು ಕರಗಿಸಿ ' ಪಾರ್ವತಿ ' ಎಂದು ಕೂಗಿ ದರು. ಉತ್ತರ ಬರಲಿಲ್ಲ. ಕಿಟಕಿಯಿಂದ ಬಂದ ಗಾಳಿ ಬಿಳಿ ಸೀರೆಯ ಸೆರಗನ್ನು ಹಾರಿಸಿತು.

---

ಮುಗಿದುದು